ಶ್ರೀ

# ಧನಕೀರ್ತಿ ನಾಟಕ

ಎಂಬೀ ಕೃತಿಯು

ಎಸ್. ಶಾಂತಿರಾಜಯ್ಯನವರಿಂದ ನವೀನವಾಗಿ ವಿರಚಿಸಲ್ಪಟ್ಟು,

ನೆಲ್ಲಿಕಾರು ಸಂ। ಚಂದಪ್ಪಶೆಟ್ಟರಿಂದ
ಪ್ರಸಿದ್ಧಿಗೊಳಿಸಲ್ಪಟ್ಟು,



ಉಡುಪಿ ಶ್ರೀ "ಸದಾನಂದ" ಮುದ್ರಾಶಾಲೆಯಲ್ಲಿ
ಯು. ನರಸಿಂಹ ಮಲ್ಯರಿಂದ ಮುದ್ರಿಸಲ್ಪಟ್ಟಿತು.

1915.





Price: 0—6—0.] [ಬೆಲೆ: ೦—೬—೦.

ಪ್ರ. ಸಂ. ೨೯

ಶ್ರೀ

# ಧನಕೀರ್ತಿನಾಟಕ

ಎಂಬೀ ಕೃತಿಯು

ಎಸ್. ಶಾಂತಿರಾಜಯ್ಯನವರಿಂದ ನವೀನವಾಗಿ ವಿರಚಿಸಲ್ಪಟ್ಟು,

ನೆಲ್ಲಿಕಾರು ಸಂ| ಚಂದಪ್ಪಶೆಟ್ಟರಿಂದ

ಪ್ರಸಿದ್ಧಿಗೊಳಿಸಲ್ಪಟ್ಟಿತು.



ಉಡುಪಿ.

ಶ್ರೀ "ಸದಾನಂದ" ಮುದ್ರಾಶಾಲೆ.

1915.

# ಪ್ರಾರ್ಥನಾ.

ಮಹಾಶಯರೇ,

**ಲೋ**ಕದಲ್ಲಿ ಸರ್ವಸಾಮಾನ್ಯವಾಗಿ ತತ್ವಜ್ಞಾನಬೋಧಕಗಳಾದ ಮತ್ತೂ ರಸಭರಿತಗಳಾದ ನಾಟಕಗಳು ಜನರ ಮನಸ್ಸನ್ನು ಅಪಹರಿಸುವಂತೆ ಬೇರೆ ಯಾವ ಪುರಾಣೇತಿಹಾಸಾದಿಗಳೂ ಮಾಡಲಾರವೆಂಬುದು ಅನುಭವಸಿದ್ಧವಷ್ಟೆ. ಆದರೆ ಪೂರ್ವಾಚಾರ್ಯಪ್ರಣೀತವಾದ ಅಂತಹ ಕೃತಿಗಳು ಸಂಸ್ಕೃತ ಪ್ರಾಕೃತ ಮೊದಲಾದ ಪ್ರೌಢಭಾಷೆಗಳಲ್ಲಿ ರಾರಾಜಿಸುವುದರಿಂದ ಆ ಭಾಷಾಜ್ಞಾನವಿಲ್ಲದ ಅನೇಕರಿಗೆ ಕನ್ನಡಿಯೊಳಗಿನ ಗಂಟಿನಂತೆ ಫಲಕಾರಿಯಾಗದೆ ಅನಾಯಕವಾಗಿ ನಿರ್ನಾಮವನ್ನು ಹೊಂದಿದವು; ಅಲ್ಲದೆ ಗ್ರಂಥಗಳ ಪರಿಚಯವು ಕೂಡ ಲಘುಭಾಗ್ಯರಿಗೆ ಕಷ್ಟಸಾಧ್ಯವು. ಇದನ್ನರಿತೇ ನಮ್ಮ ಮಿತ್ರರಾದ ಜೈನೇತರರು ಕಾಲಾನುವರ್ತಿಗಳಾಗಿ ವಿಧವಿಧದ ಅನೇಕ ನಾಟಕಗಳನ್ನು ರೂಪಿಸಿರುವರು. ನಮ್ಮಲ್ಲಿ ಯಾವರೋ ನಾಟಕಗಳು ಅತಿ ವಿರಲ. ಇಂತಹ ಕುಂದಕವನ್ನು ಹೋಗಲಾಡಿಸಲಸಮರ್ಥನಾದರೂ ಕೇವಲ ಸಮಾಜಸೇವಾಭಿಲಾಷೆಯಿಂದ ಶೃಂಗಾರಾದಿನವರಸಪೂರಿತವಾಗಿ ಇಚ್ಛಾಫಲವನ್ನೀಯುವ ಪುಣ್ಯಪುರುಷ ಶ್ರೀಧನಕೀರ್ತಿಚರಿತ್ರವನ್ನು ನಾಟಕರೂಪದಿಂದ ರಚಿಸಿ ಸಮಾಜದ ಮುಂದಿಟ್ಟಿರುವೆನು. ಇದರಲ್ಲಿ ವಿಸ್ಮೃತಿಯಿಂದ ಪ್ರಮಾದಗಳಿದ್ದರೆ ದಯವಿಟ್ಟು ತಿಳಿಸುವ ಮಹನೀಯರಲ್ಲಿ ಕೃತಜ್ಞತಾಪೂರ್ವಕವಂದನೆಗಳನ್ನು ಸಮರ್ಪಿಸುವೆನಲ್ಲದೆ ಮುಂದಿನ ಆವರ್ತನದಲ್ಲಿ ಸರಿಪಡಿಸಿಕೊಳ್ಳುವೆನು.

ಇತಿ ಪ್ರಾರ್ಥಿ,

ಸುಷ್ಮದ ಶಾಂತರಾಜ ಹೆಗ್ಗಡೆ.



॥ ಓಂ ॥

## ನೇಮಿನಾಥಾಯ ನಮಃ

# ಧನಕೀರ್ತಿನಾಟಕಂ.

ಸೂತ್ರಧಾರಃ— ವೃತ್ತ ॥ ಶ್ರೀರಾಮಾರಮಣಂ । ಸುರೇಡ್ಯಚರಣಂ । ಮಾರೇಭಪಂಚಾನನಂ ॥ ಸಾರಾಸಾರವಿಚಾರಬೋಧಜನನಂ । ಕಾರುಣ್ಯರತ್ನಾಕರಂ ॥ ಪಾರಾವಾರಮಹೀಂದ್ರಜಾತಮಮಲಂ । ಸೂರೇಂದುಕೋಟಿಪ್ರಭಂ । ರಾರಾಜದ್ಧರಿವಂಶರಾಜತಿಲಕಂ । ಶಾರೀಶನೇಮಿಂ ಭಜೇ ॥

॥ ರಾಗ-ಕಾಂಬೋದಿ; ತಾಳ-ಆದಿ. ॥

ನೇಮೀಶನೆ । ನಾಂ ವಂದಿಪೆ ನಿನ್ನನೆ ॥ ಪಲ್ಲ ॥ ಪ್ರೇಮೀ । ಕಾಮವೈರಿನಿರ್ನಾಮಿ । ಶ್ಯಾಮಲಾಂಗಾಭಿರಾಮಿ । ಕಾಮಿತಾರ್ಥಸುಧಾಮಿ ॥ ನಾಮಸಹಸ್ರಸು । ತ್ರಾಮಪೂಜಿತನೆ । ಸೋಮಶಾಂತ ಮಿಗೆ । ನೇಮದಿಂದೆ ಪೊರೆ ॥ ೧ ॥ ಖ್ಯಾತ । ವೀತರಾಗಹೃತ್ಪ್ರೀತ । ಜಾತಿಜರಾಮಯಜೀತ । ಭೂತದಯಾಗುಣಯುಕ್ತ ॥ ಘಾತಿವ್ರಾತವ । ಘಾತಗೆಯ್ದ ಸು । ಜ್ಯೋತಿರೂಪಧರ । ನಾಥ ಪಾಲಿಪುದು ॥ ೨ ॥ ಧೀರ । ಸಾರತತ್ವಸುವಿಚಾರ । ಪಾರಾವಾರಗಭೀರ । ನೀರಮುಕ್ತಿಸುವಿಹಾರ ॥ ಧಾರಿಣಿಗತಿಶಯ । ಕಾರಪುರೀಶ್ವರ । ತೋರಿ ಕರುಣವನು । ದಾರ ರಕ್ಷಿಪುದು ॥ ೩ ॥

॥ ರಾಗ ನಾಟಿ ರೂಪಕ. ॥

ಪೊರೆವುದೆನ್ನನು ಶಾರದೆ । ವರಮತಿವಾರಿಧೆ ॥ ಪಲ್ಲ ॥ ಸುರನರತತಿನುತ । ಸರಸಿಜ ಪದಯುತ । ಪುರುಜಿನಪತಿಜಾತೆ । ಭಾರತೆ ಸುಲಲಿತೆ ॥ ೧ ॥ ಹರಿಣನಯನೆದಯೆ । ವೆರೆದು ಸಲಹೆ ಮಾಯೆ । ಶರಣಜನರಪ್ರಿಯೆ । ಕರುಣವಿರಿಸೆತಾಯೆ ॥ ೨ ॥ ವರಸುಭಾಷಿಣೆ ನಿನ್ನ । ಸ್ಮರಿಸಿ ವಂದಿಸಿ ಮುನ್ನ । ಒರೆವೆನೀಕೃತಿಯನ್ನ । ಸರಸಗೊಳಿಸೆ ಚೆನ್ನ ॥ ೩ ॥

**ಸೂತ್ರಧಾರ:**—(ಮಂಗಲಾನಂತರ) ಆಹಾ ದೈವವೆ! ಇಂದಿನ ಶುಭಮುಹ ರ್ತಾತಿಶಯವನ್ನು ಏನೆಂದು ಬಣ್ಣಿಸಲಿ? ಶೃಂಗಾರಾದಿನವರಸಾಸ್ವಾದಕರಾ ರಸಿಕರು ಸಭೆಯನ್ನಲಂಕರಿಸಿರುವರು. ಇಂಥಾ ಪೂಜ್ಯರ ಚಿತ್ತಾಹ್ಲಾದಗೆ ಳಿಸಿದರಲ್ಲವೆ ಕಲಾಪ್ರೌಢಿಮೆಯು ಮೆರೆಯುವುದು! (ಸಭೆಯಂ ನೋಡಿ) ಸಭಿಕ ಮನೋಗತವಿಷಯವನ್ನು ಮುಖಭಾವದಿಂದಲೇ ಸೂಚಿಸಿದಿರಾ? ಸ್ಮೃತನ ದೆನು.

**ಕಂದ ॥** ಮತಿಹೀನರ ಕೃತಿಗೇಳುತೆ ।
ಅತಿಬೇಸರವಡೆದೆವೈಸೆ ನಿತ್ಯಂ ಮನದೊಳ್ ॥
ಹಿತವೆಂತಪುದೀ ಕಥೆಯೊಳ್ ।
ರತಿಪತಿಜಿತನೇ ಸಮಂತು ತಾನಿದನರಿವಂ ॥

ಹೀಗೆನ್ನುವಿರಾ? ಸರಿ! ವಿವೇಕಾವಿವೇಕಾಭಿಜ್ಞರಾದ ಅರಸಿಕರಾ ನಾಟಕವಂ ನೋಡಿ ಅವಿಶ್ರಾಂತರಾದ ಕೋವಿದರಂ ಆವ ವಿಧದಿಂದಾನಂ ಗೊಳಿಸಲಿ? (ಕೊಂಚ ಚಿಂತಿಸಿ) ನಟಿಯಂ ಕರೆದಾಲೋಚಿಸುವೆನು.

**ಕಂದ ॥** ತರುಣಿಯೆ! ಮಧುಕರವೇಣಿಯೆ! ।
ಕರುಣಾಮೃತಖನಿಯೆ! ಮಾರವರನರಗಿಣಿಯೆ ॥
ತೆರಳುವದೀಗಳ್ಸಭೆಗಂ ।
ವರಸಿಂಗರವೆತ್ತು ಮೋದದಿಂದತಿ ಜವದಿಂ ॥

॥ ರಾಗ-ಸುರಟಿ-ತಾಳ-ರೂಪಕ ॥

ಮಂಗಲಾಂಗಿ ಬಾರೆ ನೀ ಕು । ರಂಗನಯನೆ ॥ ಸಿಂಗರದಾ ಮುಖ ತೋರೆ । ಭೃಂಗಕುಂತಳೆ ॥ ೧ ॥ ಸಾರಸುಗುಣೆ । ವಿಾರಿಡಕ್ಕರೆ । ಬೀರಿಕರುಣ ಸೇರಿಬಂದ ವಿಬುಧತತಿಯ । ದಾರ ಚರಿತದಿ ॥ ೨ ॥ ಭೂರಿಹರುಷದಿಂದ ನಿರತ ರೆಯುತಿರ್ಪುದು । ಬೀರಿ ಮುದವ । ತೋರಿ ಸೊಗೆವ । ನೀರೆಯೊರೆವುದು ॥

**ನಟಿ:**—(ಪ್ರವೇಶಿಸುತ್ತಾ) ॥ ರಾಗ-ಕಮಾಚು-ರೂಪಕ. ॥

ಹರುಷವನಾಂತೆ ನೀಗನಾಂ । ವರಸರೋಜನಯನನೆ ॥ ಪಲ್ಲ ॥ ಸ ಸಭೆಯಂದದಿ । ಪರಿಪರಿರತುನದ । ತರತರಪುತ್ತಳಿಯಿಂ ॥ ೧ ॥ ಕವಿವಾ

ಗಳಿಂ । ನವರಸಿಕರ ಸಿರಿ । ಭುವನವ ಮೋಹಿಪುದು ॥ ೨ ॥

ಪೂಜ್ಯರೇ! ದಾಸಿಯಂ ಕರೆಯಿಸಿದ ಕಾರ್ಯಗೌರವವೇನೋ?

ಸೂತ್ರಧಾರ:—ಗುಣವತಿಯೆ! ಈ ಸಭಿಕರು ಯಾರ ರೂಪಕದಿಂದ ತೃಪ್ತರಾಗುವರೊ?

ನಟಿ:—ಆರ್ಯಪುತ್ರನೇ! ಏನಿದು ವಿಸ್ಮೃತಿ? ಈ ಮೊದಲೇ ಸುಮ್ಮದ ಶಾಂತರಾಜಯ್ಯನವರಿಂದ ರಚಿಸಲ್ಪಟ್ಟ ಪುರುಷೋತ್ತಮ ಶ್ರೀ ಧನಕೀರ್ತಿ ಚರಿತ್ರವು ಪೂಜ್ಯರಿಂದಲೇ ಅಭ್ಯಸಿಸಲ್ಪಟ್ಟಿರುವುದಲ್ಲವೇ?

ಸೂತ್ರಧಾರ:—ಸರಿಸರಿ! ಕಾರಣಾಂತರದಿಂದ ಮರೆದಿರುವ ವಿಷಯ ವನ್ನು ಸ್ಮೃತಿಪಥಕ್ಕೆ ತಂದ ನಿನ್ನಂಥ ಪ್ರೌಢೆಯು ಸಾರಥಿಯಾಗಿರುವಲ್ಲಿ ಯಾವ ಕಾರ್ಯವು ತಾನೆ ಫಲಕಾರಿಯಾಗಲಾರದು? ಶ್ರೀ ಧನಕೀರ್ತಿಚರಿತ್ರವನ್ನಾಡಿಯೇ ಸಭಾಸದರ ಅವಿಶ್ರಾಂತಾನಂದಮಂ ನೋಡುವ. ನಾಟಕಾರಂಭದಲ್ಲಿ ಸಮಯೋಚಿತವಾದ ಗಾನವಂ ಮಾಡು.

ನಟಿ:—ಯಾವ ಋತುವಂ ಬಣ್ಣಿಸಲಿ?

ಸೂತ್ರಧಾರ: — ಪ್ರಿಯೆ! ಲಕ್ಷ್ಯಗೊಡು.

**ಕಂದ** ॥ ಫುಲ್ಲಾಕ್ಷಿಯರುಲ್ಲಸದಿಂ ।
ಮಲ್ಲಿಗೆಪೂಮಾಲೆಗಟ್ಟಿ ಪಸದನಗೊಳಿಸಲ್ ॥
ನಲ್ಲಂ ತಾನಿಲ್ಲದಿರಲ್ ।
ತಲ್ಲಣಿಪರ್ ಬಗೆಯೊಳಮವು! ವಾಸಂತಿಯೊಳಂ ॥

ಇಂತು ಸರ್ವಜನಮದೋದ್ರೇಕಮಂ ಕೊಳಿಪ ಮಾಧವನನ್ನಧಿಕರಿಸಿ ಗಾನವಂ ಮಾಡು.

ನಟಿ: — ಅನುಜ್ಞೆಯಂತೆ.

|| ರಾಗ-ಕಮಾಚು-ತಾಳ-ರೂಪಕ ||

ರಾರಾಜಿಪುದೆಂತು ಟೋ ಮಧು || ಪಲ್ಲ || ಬೀರುತೆ ತಾಂ ಸಮ್ಮೋದವ || ಅನುಪಲ್ಲ || ಅರವಿಂದವು | ವರಕುಂದವು | ಸಿರಿದೋರುತ | ಮೆರೆದಾಡುತ | ಕರೆವುದು ನಿರತ || ೧ || ಅಳಿಗಿಳಿಗಳು | ಕೊಳಫಳದೊಳು | ತೊಳತೊಳಲುತ || ಬಳಬಳಲುತ | ತೊಳಗಿರೆ ಸತತ || ೨ || ಸತಿಜನಗಳು | ರತಿಸುಖದೊಳು | ಪತಿಯಗಲುತ | ಮತಿಯೆಸಗುತ || ಹತಿಪರುಸತತ || ೩ ||

**ಸೂತ್ರಧಾರ**:— (ಶಿರವಂ ಕಂಪಿಸುತ್ತಾ) ಶೃಂಗಾರಮುದ್ರೆಯೇ! ನಿನ್ನ ಮಧುರಗಾನಾಸ್ವಾದನದಿಂದ ಸಮಸ್ತರಸಿಕರೂ ಸಂತೋಷಪೂರಿತರಾದರು.

**ನಟಿ**:— ಇದೆಲ್ಲಾ ಪೂಜ್ಯರ ಅನುಗ್ರಹವೇ ಸರಿ. (ತೆರೆಯಲ್ಲಿ) ಶ್ರೀಮನ್ಮಹಾರಾಜಾಧಿರಾಜ ವಿಶ್ವಂಧರ ಮಹೀಪಾಲಪರಾಕ್! ಆಸ್ತೆ! (ಎಂದು ಜಯಶಬ್ದ ವಾಗುವುದು.)

**ನಟೀ**:— ಪ್ರಾಣಪ್ರಿಯನೇ! ಕಾಪಾಡು; ಕಾಪಾಡು. (ಎಂದು ಕಂಪಿಸುವಳು.)

**ಸೂತ್ರಧಾರ**:—(ಕೇಳಿ) ಭಯವೇಕೆ? ಮಾಳವದೇಶಾಧಿಪತಿಯಾದ ವಿಶ್ವಂಧರಮಹಾರಾಜನು ಆಸ್ಥಾನಮಂಟಪಕ್ಕೆ ತೆರಳುವನಾದುದರಿಂದ ಜಯಘೋಷವಾದುದು. ನಾವುಗಳು ಇಲ್ಲಿ ನಿಲ್ಲದೆ ಮುಂದಿನ ಪಾತ್ರಗಳಂ ಸಿದ್ಧಪಡಿಸುವ ನಡೆ. (ಎಂದು ತೆರಳುವರು.)

|| ಇತಿ ಪ್ರಸ್ತಾವನಾ ||



## ವಿಶ್ವಂಧರ ಮಹಾರಾಜನ ದರ್ಬಾರ್.

|| ರಾಗ-ತೋಡಿ-ರೂಪಕ ||

**ರಾಜ**:— ಸಚಿವವರ್ಯ ಆಲಿಸೀಗ | ಉಚಿತವಚನವ ನೀನು || ಪಲ್ಲ || ಉಚಿತವಾಗೆ ಪ್ರಜೆಯ ಸುಖವ | ವಚಿಪುದೀಗಳೇ ಬೇಗ || ೧ || ಭೂಪರೆಲ್ಲ ಸಾರ್ವಭೌಮ | ಕೋಪಕಂಜಿ ಕಾಲಕಾಲದಿ | ಸಾಪರಾಧಮಾರ್ಜನನಿ

ಕ್ಷೇಪಗಳನೆ ತಂದೀವರೆ ॥ ೨ ॥ ಭೂಮಿದಿವಿಜವರ್ಣಮೆಲ್ಲ । ಕಾಮಹರನ ಪೂಜಿಸುತ್ತೆ । ನೇಮಧರ್ಮಗಳನು ಬಿಡದೆ । ಕ್ಷೇಮಾನ್ವಿತರಾಗಿರ್ಪರೆ ॥ ೩ ॥

ಮಂತ್ರಿ:—ಜೀಯಾ! ಲಾಲಿಸು

॥ ರಾಗ-ಶಂಕರಾಭರಣ-ಅಷ್ಟತಾಳ ॥

ಭೂವರಶಿರೋಮಣಿ ॥ ಪಲ್ಲ ॥ ಭಾವಿಸಿ ಆಲಿಸು ನೀನಿದ ॥ ಅನು ॥ ಅವನಿಪಾಲಕರೆಲ್ಲ ವಹಿಲದೆ । ಬವರವನು ತೊರೆತೊರೆಯುತೆ ॥ ವಿವಿಧರೀತಿಯ ಕಪ್ಪಕಾಣ್ಕೆಯ । ನಿವಹವನು ತಂದೀವರಯ್ ॥ ೧ ॥ ನಿಖಿಲಜನಗಳು ಧಾನ್ಯ ಧನದಿಂ । ಸಕಲವಿಧಸುಖಭೋಗದಿಂ ಸುಕರನಾಕನಿವಾಸಿಗಳ ವೊಲು । ಸುಖಿಗಳೆಂಬುದನೊರೆಯಲೇನಿದ ॥ ೨ ॥ ವೈರಿನಿಕರವು ಕಾವರಿಲ್ಲದೆ । ಭೂರಿಭೀತಿಯನಾನುತೆ ॥ ಸೇರುವುದು ಕಾಂತಾರವನು ತವ । ಧೀರತಾವರಸೂರ್ಯನುದಯದೆ ॥ ೩ ॥

ರಾಜ:—ಎಲೈ! ದೋರ್ದಂಡಪ್ರಚಂಡಚಂಡಾಂಶುಸದೃಶನಾದ ಚಮೂಪತಿಯೆ! ನಮ್ಮ ಅನುಪಮಸೇನಾವಳಿಯೊಡನೆ ಶತ್ರುರಾಜರ ಉದ್ದಂಡ ಪರಾಕ್ರಮವಂ ಖಂಡಿಸುತ್ತಿರುವೆಯಾ?

ಸೇನಾಪತಿ:—

ಕರದಲಿ ಧರಿಸಿಹ ವರಕರವಾಲದೆ ।
ಅರಿಗಳ ನಿಕರವ ನರಿಯುತೆ ಭರದಿಂ ॥
ಕುರಿಮರಿಗಳ ತೆರದಲಿ ತರಿಯುತೆ ಸುರ ।
ಪುರವನು ತೋರುವೆ ನೆರೆಬೇಗ ॥

ರಾಜ:—ಎಲೈ! ಸೇನಾನಾಯಕನೆ! ನಿನ್ನಂಥಾ ಶೌರ್ಯಾಲಂಕಾರಶೇಖರನು ದೇಶಸಂರಕ್ಷಣೆಯಲ್ಲಿ ನಿತರನಾಗುತ್ತಿರಲು ಅರಿರಾಯರ ಉಪಟಳವು ಸ್ವಪ್ನೇಪಿ ಉಂಟಾಗಲಾರದೆಂದು ನಿರ್ಧರಿಸಿದೆನು. ಮಂತ್ರಿಯೆ! ಸಂಸಾರದಲ್ಲಿ

ಭೋಗಾಸಕ್ತವಾದ ಸಮಸ್ತಜೀವಕೋಟಿಗೂ ಅವಿಶ್ರಾಂತಾನಂದಜನ
ವಾದ ವಸಂತಋತುವು ಪ್ರಾಪ್ತವಾದುದರಿಂದ ಕ್ರೀಡಾನಿಮಿತ್ತದಿಂ ಉಪವ
ಗನುನಾಭಿಲಾಷಿಯಾಗಿರುವೆನು. ನೀನೂ ಕೂಡ ಅಲ್ಲಿಯೆ ಸಮಯವನ್ನುನಿ
ಕ್ಷಿಸುತ್ತಿರುವುದಲ್ಲದೆ ಆರಾಮಶೃಂಗಾರಮಂ ಮಾಡಲು ಮಾಲಾಕಾರನಿ
ಆಜ್ಞೆಯನ್ನೀವುದು.

ಮಂತ್ರಿ:—ಅಪ್ಪಣೆ! (ಎಂದು ಹೊರಟುಹೋಗುವನು.)



**ಉಪವನ:—**

ಬಂಧುಶ್ರೀ:—(ಸಖಿಯರೊಡನೆ ಉದ್ಯಾನದಲ್ಲಿ ಹೂಗೊಯ್ಯುವಳು.)

|| ರಾಗ-ಕಮಾಚುಜಿಲ್ಲಾ-ತಾಳ ಆದಿ ||

ಬಂಧುಶ್ರೀ:— ಬಾ ನೀರೆ ಸಖಿ । ಸಾರಸುಮವ ಕೊಯ್ಯಲು || ಪಲ್ಲ
ಇಂದುವದನೆ ಮಕ | ರಂದವ ಸೂಸುವ | ಕುಂದಸುಮವ ಕೊಯ್ಯುವ || ೧

೨ನೇಸಖಿ:— ರಾಜೀವಾಕ್ಷಿಯೆ ಬಲು । ಸೋಜಿಗವೆನಿಸಿಹ । ಜಾಜಿವ
ಲ್ಲಿಯ ತರುವ || ೨ ||

೩ನೇಸಖಿ:—ಮಂಜುಳವಾಣಿಯೆ । ಕುಂಜರಗಮನೆಯೆ । ಕಂಜಸುವ
ಪ ತಿರಿವ || ೩ ||

೪ನೇಸಖಿ:— ಅಂಗಜಮದಕರಿ | ಭೃಂಗನಿಭಾಳಕೆ | ಭೃಂಗಮರುಗವನಕೆ||೪

(ಮಂತ್ರಿ ವನದಲ್ಲಿರುವನು.)

(ರಾಜನು ಪ್ರವೇಶಿಸುವನು.)

ಮಂತ್ರಿ:—ಜೀಯಾ! ವಂದಿಸುವೆನು.

ರಾಜ:—ಮಂತ್ರಿಯೆ! ಈ ವನವು ಎಷ್ಟು ರಮಣೀಯವಾಗಿರುವುದು?

|| ರಾಗ-ದರ್ಬಾರು-ರೂಪಕ ||

ಸಚಿವನೆ ನೋಡೀ ವನವನು । ವಚಿಸುವದಳವೇ ॥ ಪಲ್ಲ ॥ ಎಲ್ಲಿ ನೋಡ ಲಲ್ಲಿ ವಲ್ಲಿ । ಫುಲ್ಲಶರನ ತೂಣದಂತೆ ॥ ಮಲ್ಲಿಕಾದಿಸುಮಗಳಿಂದ । ಉಲ್ಲ ಸವನು ತೋರುತಿಹುದು ॥ ೧ ॥ ಬಾರಿಬಾರಿ ತರುಗಳಿಲ್ಲಿ । ತೋರಮುತ್ತಿನಂತೆ ಮೆರೆವ । ಸಾರವಾದಫಲಗಳಿಂದೆ । ಭೂರಿಸುಖವ ಬೀರುತಿಹುದು ॥ ೨ ॥ ಮೆರೆಯುತಿರುವ ಕೊಳಗಳಲ್ಲಿ । ಚರಿಸುತಿರುವ ಹಂಸಗಳಿಂ ॥ ಚರಮದಾಗೆ ಅಳಿಗಳು ತಾ । ಮರಸದೆ ನರ್ತಿಸುತಿರ್ಪುವು ॥ ೩ ॥

ಬಂಧುಶ್ರೀ:— (ಉದ್ಯಾನದಲ್ಲಿ ರಾಜನಿಗೆ ಕಾಣುವಂತೆ ನಟಿಸಿ ಮರೆಯಾಗುವಳು.)

ರಾಜ:— (ನೋಡಿ)

**ಕಂದ ॥** ರತಿಯೋ ರಂಭೆಯೊ ಮನಸಿಜ ।
ಲತೆಯೋ ಶಚಿಯೋ ಸಮಂತು ವನದೇವತೆಯೋ ।
ಅತಿಶಯರೂಪದಿನೆಸೆವೀ ।
ಸತಿಯಾರ್ರೈ ಪೇಳ್ಪುದೆನಗೆ ಮಂತ್ರಿವರೇಣ್ಯಾ ॥

ಈ ವನದೇವತೆಯೇ ಮೂರ್ತಿರೂಪದಿಂ ಅವತರಿಸಿ ಕಣ್ಣಿಗೆ ಮಿಂಚಿನಂತೆ ಭ್ರಮೆಯಂಗೊಳಿಸಿ ಅದೃಶ್ಯವನ್ನೈದಿದ ಕೋಮಲಾಂಗಿಯು ಮಾಯೆಯೋ—ಪ್ರತ್ಯಕ್ಷಮಾನುಷಸ್ತ್ರೀಯೋ? ಸಾಕ್ಷಾತ್ ಸ್ತ್ರೀಯಾಗಿರುವಲ್ಲಿ ಸವಿಸ್ತರವಾಗಿ ಯಾರೆಂಬುದಂ ತಿಳಿಸು.

ಮಂತ್ರಿ—ಪೂಜ್ಯರ ಪರಮಪ್ರೀತಿಪಾತ್ರಮಿತ್ರನಾದ ಐಶ್ವರ್ಯದಿಂ ಧನದಂಗೆಣೆಯಾದ ಜಿನಪದಸರಸಿಜಭೃಂಗೋಪಮ ರಾಜಶ್ರೇಷ್ಠಿ ಗುಣಪಾಲಸೆಟ್ಟಿಯ ಮೋಹದಕುಮಾರಿಯಾದ ಈ ನವೋಢೆ ಸಖಿಯರಿಂಗೂಡಿ ನಮ್ಮಾಗಮನಮಂ ತಿಳಿಯದೆ ಕ್ರೀಡಾನಿಮಿತ್ತದಿಂ ಬಂದಿರುವಳು. ಈಕೆಗೆ ಬಂಧುಶ್ರೀಯೆಂಬ ಸಾರ್ಥಕನಾಮವುಂಟು.

ರಾಜ:—ಮಂತ್ರಿಯೆ! ಈ ಅಪರಾಲಕ್ಷ್ಮಿಯಾದ ಸುಂದರಿಯಂ ಬ್ರಹ್ಮನು

ಸೃಷ್ಟಿಸುವಲ್ಲಿ ಸಾರಭೂತವಾದ ವಸ್ತುಗಳಂ ಶೇಖರಿಸಿ ಉಂಟುಮಾಡಿದಲ್ಲ
ಈ ವೈಖರಿ ಉಂಟಾಗಲಾರದು.

ಕಂದ ॥ ಶಶಿಯಿಂ ಮುಖಮಂ ಮೇಣ್ ಪ್ರವಿ|
ಲಸಿತೇಂದೀವರದೆ ನೇತ್ರಮಂ ಚಂಪಕದಿಂ||
ಮಿಸುಪಾ ನಾಸಿಕಮಂ ನೆರೆ|
ಪೊಸಯಿಸಿದಂ ಧಾತೃ ನಾರಿಯೊಳ್ಮೆಯ್ಸಿರಿಗಂ||

(ಎಂದು ಸುಮ್ಮನಿರುವನು.)

**ಮಂತ್ರಿ**:— ಜೀಯಾ! ಸೂರ್ಯಾಸ್ತಮಯಕಾಲವು ಸಮೀಪಗತವಾದ
ದರಿಂದ ಪಟ್ಟಣವನ್ನು ಸೇರಬಹುದು.

**ರಾಜ**—ಅಸ್ತು! ನೀನು ಶೀಘ್ರವಾಗಿಯೇ ಆಸ್ಥಾನಾಭಿಮುಖನಾಗು.

**ಮಂತ್ರಿ**—ಅಪ್ಪಣೆ! (ಎಂದು ತೆರಳುವನು.)



### ರಾಜನ ಆಸ್ಥಾನ.

**ಮಂತ್ರಿ**:—(ಪ್ರವೇಶಿಸಿ) ರಾಜೇಂದ್ರನಿಗೆ ಮಣಿವೆನು.

|| ರಾಗ–ಶಂಕರಾಭರಣ-ರೂಪಕ. ||

**ರಾಜ**:— ಮಂತ್ರೀಶನೇ ನೀಂ ಪೋಗುವುದೈ । ತಂತ್ರಕೀಗ ॥ ಪಲ್ಲ ॥ ಇಂದ
ಮುಖಿ । ಯಂದವನ್ನು । ಚಂದದಿಂದ । ಲಿಂದೀಕ್ಷಿಸಿ । ಕಂದರ್ಪಾರ । ವಿಂ
ಶರ । ದಿಂದಲೆನ್ನ । ಕುಂದಿಸಿದ ॥ ೧ ॥ ಶೀಲವತ । ಮೂಲಗುಣ । ಪಾ
ನೊಳು । ಲೀಲೆಯಿಂದ । ಲೋಲಾಂಬಕೆ । ಬಾಲೆ ಭೂಮಿ । ಪಾಲಗೆಂದ
ಕೇಳುವದು ॥ ೨ ॥ ರೂಢಿಯಲಿ । ಪ್ರೌಢನೆಂದು । ನಾಡಿನೊಳು । ಪಾಡ
ವರು । ಗಾಢದಿಂದ । ನೀಡುವನು । ಮೋಡಿಮಾತ । ನಾಡನವೆ ॥ ೩ ॥

ತದುದ್ದಿಶ್ಯ ಈಗಲೇ ಹೋಗಲುದ್ಯುಕ್ತನಾಗು.

**ಮಂತ್ರಿ:**—ರಾಜರುಗಳಿಗೆ ಕಾಲವನ್ನರಿಯದೆ ಹೇಳಿದ ವಚನವು ಫಲಕಾರಿಯಾಗಲಾರದು. (ಎಂದೆನ್ನುತ್ತಾ ಹೊರಟುಹೋಗುವನು.)



## ರಾಜವೀಧಿ.

**ಮಿತ್ರ:**—ಮಂತ್ರಿಯೆ! ಲಕ್ಷ್ಮೀನಿವಾಸದಂತೊಪ್ಪುವ ಈ ಸದನವು ಎಷ್ಟು ರಮಣೀಯವಾಗಿರುವುದು! ಪುರೋದೃಶ್ಯತರಭಾಗಮನೀಕ್ಷಿಸು.

|| ರಾಗ-ಶಂಕರಾಭರಣ-ಚಾಪುತಾಳ. ||

ಸೌಧಮೆಂತೋ | ಮೋದವ ಜನಿಕುಂ || ಪಲ್ಲ || ವರಮರಕತ ಬ | ಜ್ಜರಪುಷ್ಯರಾಗದಿಂ | ಸುರರಾಜಸದನಕೆ | ಸರಿಯೆನಲಿರಲು || ೧ || ಎಲ್ಲಿ ನೋಡಿದೊಡಲ್ಲಿ | ಫುಲ್ಲಾಸ್ತ್ರಕೃತಿಯಂತೆ | ಚೆಲ್ವಿನ ಪ್ರತಿಮೆಯೊ | ಳುಲ್ಲಾಸ ಮೆನಿತೊ || ೨ || ಸಿರಿಯಿಂದೆ ಧನದನು | ಶಿರವ ಕಂಪಿಸೆತಾನೀ | ನರಪನೆಂತಿರುವನೊ | ಪರಮೇಶನರಿವಂ || ೩ ||

ಅಮಮ! ಏನು ಸುಂದರ!

**ಮಂತ್ರಿ:**—ಇದೇ ನಮ್ಮ ಕಾರ್ಯಗೌರವಾಧೀನವಾದ ರಾಜಶ್ರೇಷ್ಠಿ ಗುಣಪಾಲಶೆಟ್ಟಿಯ ನಿಕೇತನವು. ಸೊಬಗಿನಿಂದ ಅಲಕಾವತಿಗೆಣೆಯಾಗಿರುವುದು (ಎಂದು ಒಳಗೆ ಪ್ರವೇಶಿಸಿ, ಶ್ರೇಷ್ಠಿಯನ್ನು ಕಂಡು) ಗುಣಮಣಿಯೆ! ವಂದಿಸುವೆನು.

**ಗುಣಪಾಲ:**—ಪೀಠವು ಸಿದ್ಧವಾಗಿರುವುದು. ಮಂಡಿಸುವುದಲ್ಲದೆ, ರಾಜೇಂದ್ರನ ಶುಭವಾರ್ತೆಯನ್ನೂ ಬಿಜಯಂಗೈದ ಉದ್ದೇಶವನ್ನೂ ತಿಳಿಯಲು ಕುತೂಹಲವಿಶಿಷ್ಟನಾಗಿರುವೆನು.

**ಮಂತ್ರಿ:**—ಎಲ್ಲರಿಗೂ ಮಂಗಲವೇ ಸರಿ. ಪ್ರಕೃತ ನಾನು ಬಂದ ಉದ್ದೇಶವೇನೋ—ಕೇಳುವೆಯಾ?

|| ರಾಗ-ಧನಾಸಿರಿ-ತಾಳಆದಿ. ||

ಶ್ರೇಷ್ಠಿವರ ಲಾಲಿಸೀಗ ನೀಂ || ಪ || ಬಾಲಾರ್ಕತೇಜ ನೃ | ಪಾಲಗೆ ನಿನ್ನ

ಯ । ಬಾಲೆ ಕುಮಾರಿಯನು । ಲೀಲೆಯಿಂದೀವುದು ॥ ೧ ॥ ಗುಣ
ಣಿಯೆ ನಿನ್ನ । ಗಣನೆಗೆ ಮಿಾರಿದ । ಪಣಕೆ ಪುಣ್ಯಕೆ ಸರಿ । ಯೆಣೆಯಿಲ್ಲ
ಪರಿ ॥ ೨ ॥ ಸಡಗರದಿಂದಲಿ । ಜಡಜೋದ್ಭವನು ನಿಮ್ಮ । ನೊಡಗ
ಸಲ್ಕಮಿಾ । ಪೊಡವಿಗೊಡೆಯನಹೆ ॥ ೩ ॥

ಮಹನೀಯನೆ! ರಾಜಶ್ರೇಷ್ಠನು ನಿನ್ನ ಮೋಹದ ಪುತ್ರಿಯನ್ನು ವ
ಲಭಿಲಾಷೆಯಿಂದಿರುವನು. ಮನೋಗತವೆಂತಿರುವುದೋ—ತಿಳಿಯಲಭಿಲ

**ಗುಣಪಾಲ:** — ಆಹಾ! ಸಚಿವನೆ! ಪ್ರಜಾಕ್ಷೇಮಚಿಂತಕನಾಗಿ ಈ
ಯಿಂದಾಡುವುದು ಅತ್ಯಾಶ್ಚರ್ಯವೇ ಸರಿ.

॥ ರಾಗ-ಕಮಾಚು_ತಾಳ_ಅಷ್ಟ. ॥

ನ್ಯಾಯವೆ ನಿನಗಿದು ॥ ಪ ॥ ಕರುಣಾ-ಭರಣ । ಶರಣಾ ॥ ಅನು ॥ ಯೆ
ಗುವಿಲ್ಲದ । ಬಂಧುತೆಯನೆ ಮುದ । ದಿಂದೆ ಭೂವರನೊಳು । ಚಂದದಿಂ
ಗಲು ॥ ೧ ॥ ಭಾಸುರಗುಣಗಳ । ಲೇಸಿನಿಸಿಲ್ಲದೆ । ಲೇಸನಾಗಿಸಿದೊ
ಭೂಸುರರೊಪ್ಪರು ॥ ೨ ॥ ಅತಿಶಯಸನ್ಮತಿ । ಯುತನೆ ನೀನಿದಕನು । ವ
ಯನು ಮಾಡುತೆ । ಸುತೆಯನು ಕೇಳ್ವುದು ॥ ೩ ॥

ಆದುದರಿಂದ ಲೋಕಾಪವಾದವನ್ನು ಹೇಗೆ ತಾನೆ ಮಿಾರಬಹುದ
ಅಲ್ಲದೆ ನೀತಿಜ್ಞರು ಸಹ ಹೇಳುವರಷ್ಟೆ! "ಯದ್ಯಪಿ ಶುದ್ಧಂ । ಲೋಕವಿರುದ್ಧ
ನೋಕರಣೀಯಂ । ನಾಚರಣೀಯಂ." ಸುತೆಯ ಮಾತನ್ನು ಬಿಟ್ಟು ಇ
ವಾರ್ತೆಯನ್ನು ಭಾಷಿಪುದುಚಿತವು.

**ಮಂತ್ರಿ:** — ಖಂಡಿತವಾಗಿಯೂ ನಿನ್ನನ್ನು ಸುಖವಾಗಿ ಬಾಳ್ಗೊಡ
ಮುಂದಿನ ವಿಶಯವನ್ನು ಈಗಲೇ ವೇದ್ಯಗೊಳಿಸಿದೆನು.

**ಗುಣಪಾಲ:** —

ಕಂದ ॥ ಅಸುವಳಿದೊಡೆಯುಂ ವಿಹಿತಂ ।
ವಸುಮತಿನಾಥಂಗೆ ಕುವರಿಯಂ ಕುಡೆನಾನುಂ ॥
ಪುಸಿಯೆಂಬೂಹೆಯದಿಲ್ಲದೊ ।
ಲುಸಿರುವುದಯ್ ಮಂತ್ರಿ ಪೋಗಿ ನೀನಾತನೊಳಂ ॥

**ಮಂತ್ರಿ:**— ಅಪ್ಪಣೆ! (ಎಂದು ಹೋಗುತ್ತಾ) ನಾನು ಪ್ರಥಮತಃ ಹೊರಡುವಾಗಲೇ ಅಶುಭಸೂಚಕವಾದ ಶಕುನದಿಂದ ಸಂದೇಹಿಸಿದೆನು. ಈಗ ಅದು ವ್ಯಕ್ತವಾಯಿತು. ರಾಜನು ಈ ಮಾತನ್ನು ಕೇಳಿದೊಡನೆಯೇ ಕೋಪದಿಂದ ಕೆರಳಿಯೇನು ಅಹಿತವನ್ನು ಮಾಡುವನೋ ಅರಿಯೆನು.

(ಎಂದು ಹೊರಟುಹೋಗುವನು.)



**ಅರಮನೆ.**

**ರಾಜ:**— [ಸಭಾಲಂಕೃತನಾಗಿರುವನು.]

**ಮಂತ್ರಿ:**—(ಪ್ರವೇಶಿಸಿ) ಜೀಯಾ! ವಂದಿಸುವೆನು.

**ರಾಜ:**— ಮಂತ್ರಜಾಣನೆ! ಹೋದ ಕಾರ್ಯಗೌರವವೇನಾಯಿತು?

**ಮಂತ್ರಿ:**—ದೊರೆಯೆ! ಗುಣಪಾಲಶ್ರೇಷ್ಠಿಗೆ ಎಷ್ಟು ಚತುರೋಕ್ತಿಗಳಿಂದ ಬೋಧಿಸಿದರೂ ಹರಣವಳಿದರೂ ಪುತ್ರಿಯನ್ನು ಕೊಡೆನೆಂದು ಖಂಡಿತವಾಗಿ ಉತ್ತರವನ್ನಿತ್ತನು.

**ರಾಜ:** — ಹಾಗೆಂದರೇನು?

**ಕಂದ** || ಜನಪತಿಯೆಂದರಿಯದೆ ತಾಂ |
ಮನಬಂದಿಹ ಪರಿಯೊಳಿಂತು ನುಡಿದನೆ ವಣಿಜಂ ||
ಇನನುದಯದೆ ತೋರುವೆನಾ |
ಧನಮದಸಂಭೂತಗರ್ವದಿಳಿತರದಿರವಂ ||

ಈಗ ಸರ್ವರೂ ನಿಜಸ್ಥಾನಮಂ ಸೇರಬಹುದು.

(ಎಲ್ಲರೂ ತೆರಳುವರು.)



## ಗುಣಪಾಲನ ಮನೆ.

**ಗುಣಪಾಲ:** — (ಮೌನಗ್ರಸ್ತನಾಗಿ ಯೋಚನೆಯಿಂದಿರುವನು.)

**ಧನಶ್ರೀ:**—(ಪ್ರವೇಶಿಸಿ ಸಭೆಯ ಕಡೆ ನೋಡಿ) ಆಹಾ! ಪತಿ ಏನೋ ಯೆ ಚಿಸುವಂತಿದೆ. ಮುಖವು ಕಂದಿರುವುದು. ಆಗಲಿ! ವಿಚಾರಿಸಿ ನೋಡು (ಪ್ರಕಾಶವಾಗಿ) ಪ್ರಾಣಕಾಂತನೇ! ಶರಚ್ಚಂದ್ರನಂತೆ ರಾರಾಜಿಸುತ್ತಿರುವ ಆನನ ಮ್ಲಾನವಾಗಲು ಕಾರಣವೇನಿರುವುದೊ? ಆಪತ್ಕಾಲದಲ್ಲಿ ಧೈರ್ಯವೇ ಪ ಧಾನ್ಯವಲ್ಲವೇ?

**ಗುಣಪಾಲ:**—ಆಪದ್ಬಂಧುವಾದ ಧೀರೋದಾತ್ತೆಯೆ! ಆಲಿಸಿ ಕೇಳು.

|| ರಾಗ-ಬ್ಯಾಗಡೆ. ತಾಳ-ಚಾಪ್ ||

ನೀರೆ ಆಲಿಸೆ । ಧೀರೆ ಗಂಭೀರೆ ‖ ಪಲ್ಲ ‖ ವಿಾರಿ ಬಂದ ಚಿಂತೆ । ಯೇ ತಿಹುದು ಕಾಂತೆ ‖ ಅನುಪಲ್ಲ ‖ ಮಾಲವಾಧಿಪನು । ಬಾಲೆ ಬಂಧುವನು । ವ ಲದೀವುದೆಂದು । ಜಾಲಗೈವನಿಂದು ‖ ೧ ‖ ಹರಣವಳಿಯೆ । ತರುಣಿಯ ಳಿಯೆ । ತೆರನಿಲ್ಲವೆಂದೇ । ಒರೆದೆನಾನಿಂದೆ ‖ ೨ ‖ ನೋಡು ನೀನಿದನು । ರ ಥಿಪಾಲಕನು । ಕೇಡನೆಣಿಪನು । ಮಾಡುವದಿನ್ನೇನು ‖ ೩ ‖

ಎರೆಯಳೇ! ಒಡೆಯನಾದ ವಿಶ್ವಂಧರಮಹಾರಾಜನು ನಮ್ಮ ಬಾಲ ಮಣಿಯನ್ನಿಚ್ಛಿಸಿ ಮಂತ್ರಿಯನ್ನು ಕಳುಹಿಕೊಡಲು ಪ್ರಾಣತ್ಯಾಗದಿಂದಲ ಕೊಡೆನೆಂದು ಹೇಳಿದೆನು. ಛಲವಾದಿಯಾದ ದೊರೆ ಹಾನಿಯೆಸಗದೆ ಬಿಡು ನಲ್ಲವು. ನಿನ್ನ ಮತವೆಂತಿರುವುದು?

**ಧನಶ್ರೀ:**—ಆರ್ಯಪುತ್ರನೆ! ಸಖಿಯರ ಮೂಲಕ ನಾನೂ ಅಸ್ಫುಟವಾ ತಿಳಿದೆನು. ಈಗ ವ್ಯಕ್ತವಾಯಿತು. ಈ ಕುನಯರಾಜ್ಯದಲ್ಲಿರುವುದರಿಂದಲ ಪ್ರವಾಸವೇ ಶ್ಲಾಘ್ಯವೆಂದು ನನ್ನ ಅಭಿಮತವು.

**ಗುಣಪಾಲ**—ಚತುರಳೇ! ಹಾಗಿರುವಲ್ಲಿ ಇಂದು ರಾತ್ರಿಯೇ ನಮ್ಮ ಸಿದ್ಧವಾಗಿರುವ ನೂರೆಂಟು ಕೋಟಿ ದ್ರವ್ಯಸಹಿತವಾಗಿ ನಾವು ಇಲ್ಲಿ ಪರಾ

ಮಮಿತ್ರನಾದ ಶ್ರೀದತ್ತಶ್ರೇಷ್ಠಿಯಲ್ಲಿ ಅಡಗುವುದಲ್ಲದೆ ನೀನು ಗರ್ಭವತಿಯಾ ದುದರಿಂದ ಕೆಲವು ದಿನಗಳ ಪರ್ಯಂತ ಅವನಲ್ಲಿಯೇ ಇರಬೇಕಾಗಿರುವುದು. ನಾನು ಮುಂದಕ್ಕೆ ಪ್ರಯಾಣಬೆಳಸುವೆನು.

ಧನಶ್ರೀ:— ಆಜ್ಞೆಯಂತೆ (ಎಂದು ಹೋಗುವರು.)



[ಶ್ರೀದತ್ತಶ್ರೇಷ್ಟಿಯ ಮನೆ; ಗುಣಪಾಲನು ಪ್ರವೇಶಿಸುವನು.]

ಗುಣಪಾಲ:—ಮಿತ್ರನಿಗೆ ವಂದಿಸುವೆನು.

ಶ್ರೀದತ್ತ:—ಈ ಪೀಠವನ್ನಲಂಕರಿಸಬೇಕೆಂದು ವಿಜ್ಞಾಪನೆ.

|| ರಾಗ-ಅಠಾಣ-ತಾಳ-ಅಷ್ಟ. ||

ಏನಿದು ಸಖನೆ ನಿನ್ನ | ದೀ ನಡತೆಯೆ || ಪಲ್ಲ || ರೂಢಗುಣಿಯೆ ನೀನೀ | ಗಾಢರಾತ್ರಿಯೊಳೀಗ | ನಾಡನು ತೊರೆವುದೇಕೆ | ನೋಡಲದೇಕೆ || ೧ || ಚಿತ್ತಜನರಸಿಯ | ಚಿತ್ರವನಡಗಿಪ | ಉತ್ತಮಸತಿಸುತೆಯ | ರೊತ್ತಿನೊಳಿ ರೆ || ೨ || ಖೇಚರಬಾಧೆಯೊ | ನೀಚರ ಮಾಯೆಯೊ | ಯೋಚಿಸದಿರು ಸಾಕೀಗ | ಸೂಚಿಸು ಬೇಗ || ೩ ||

ಸುಹೃಚ್ಛಿಖಾಮಣಿಯೆ! ನಿನ್ನ ಮುಖಚಂದ್ರಕ್ಷಯದಿಂದ ಏನೋ ವ್ಯಸ ನದಿಂದಿರುವನಂತೆ ಕಾಣುವೆ. ಸರ್ವವಿಷಯವನ್ನೂ ಮಿತ್ರನಲ್ಲಿ ವಿಶದಗೊಳಿಸ ಬಾರದೆ?

ಗುಣಪಾಲ:—ಮಿತ್ರ! ಏನೆನ್ನಲಿ? ದೊರೆಯು ಮೋಹದ ಪುತ್ರಿಯನ್ನು ಕೇಳಲು ಎಷ್ಟಕ್ಕೂ ಕೊಡೆನೆಂದು ಛಲವಿಡಿದು ದುಷ್ಟರಾಜ್ಯದಲ್ಲಿ ಇರುವನಲ್ಲ ವೆಂದು ಹೊರಟು ಕೌಶಾಂಬೀನಗರಿಗೆ ಗಮಿಸಲು ಸಿದ್ಧನಾಗಿರುವೆನು. ನೀನಾ ದರೊ ಸಹೋದರೀಭಾವದಿಂದ ಗರ್ಭಧಾರಿಣಿಯಾದ ಮದ್ಭಾರ್ಯೆಯನ್ನೂ ಈಗ ಸಿದ್ಧವಾಗಿರುವ ನೂರೆಂಟು ಕೋಟಿ ದ್ರವ್ಯವನ್ನೂ ಸಂರಕ್ಷಿಸುವುದು.

ಶ್ರೀದತ್ತ:—ಸ್ನೇಹಿತನೇ! ಸಂರಕ್ಷಣಾವಿಷಯದಲ್ಲಿ ಶಂಕೆಯೆ
ನನ್ನದೆಂದೇ ಭಾವವು. ಹಾ! ಕಷ್ಟಕಷ್ಟ! ನೀನು ಜಾಗರೂಕನಾಗಿ

ಗುಣಪಾಲ:—ಅಪ್ಪಣೆ! ಅಂತಃಕರಣವಿರಲಿ! (ಎಂದು ಹೊರಡುವನು).

ಧನಶ್ರೀ:--(ಮಗಳ ಸಮೀಪಕ್ಕೆ ಬಂದು) ಜೀವರತ್ನವೇ! ಅಗಲುವೆ
ಅಯ್ಯೋ! ನೀಚದೈವವೇ! ಯಾವಾಗ ಕಣ್ಣನ್ನು ತೆರೆವೆ? (ಎಂದು ವ್ಯಸನ

|| ರಾಗ-ಶಹನ-ತಾಳ-ಅಷ್ಟ. ||

ಪೋಗುವೆಯಾ ಬಾಲೆ । ನೀಗೌ ಮನದ ಚಿಂತೆ । ನಾಗರಾಜನ ರ
ಬೇಗದೆ ಕಾಯಲಿ ॥ ೧ ॥ ವಿಧುಮುಖಿಯೆ ನೀನೆ । ಮ್ಮುದರದಿ ಜನಿ
ವಿಧಿಗಿಂತುಗೆಯ್ವೊಡೆ । ಮುದವೆಂತೊ ಮನದೊಳೆ ॥ ೨ ॥ ರನ್ನದೊಡವೆ
ಕನ್ನೆಗೆ ತುಡಿಸಿ ಸಂ । ಪನ್ನಾನಂದದೊಳಿರ । ಲಿನ್ನೆಲ್ಲಿ ಸಮಯವೊ ॥ ೩ ॥
ರಿಲ್ಲದೊಡೆಯುಮಾ । ರತಿಗೆಣೆಯೆನಿಸುವ । ಸುತೆಯ ನೋಡುವ ಪುಣ್ಯ
ಗೆ ಹಾನಿಯದಾಯ್ತೆ ॥ ೪ ॥ (ಎಂದು ಸ್ತಬ್ಧಚಿತ್ತಳಾಗಿ ನಿಲ್ಲುವಳು.)

ಬಂಧುಶ್ರೀ: – ಅಯ್ಯೋ! ಪಾಪಿಯಾದ ಅಂತಕನೇ! ಕೀರ್ತಿಶೇಷ
ಸಮಸ್ತ ಪತಿವ್ರತಾಶಿರೋಮಣಿಗಳನ್ನು ನಿಷ್ಕರುಣದಿಂದ ಕೊಂಡುಯ್ದಿ
ಭೂಭಾರಕೆಯಾದ ನನ್ನಲ್ಲಿ ಅಂತಹ ಪೌರುಷವನ್ನು ಅಡಗಿಸುವೆಯಾ?
ಯಿಂದ ನಿನ್ನಧೀನಳನ್ನಾಗಿ ಮಾಡಬಾರದೆ? (ಸಮೀಪಕ್ಕೆ ಬಂದು ಚಿಂತೆಯಿಂದ

|| ರಾಗ-ಬೇಹಾಗ್-ರೂಪಕ. ||

ಎಂತು ಪೋಗಲೀಗ ಮಾತೆ । ಮುಂತೆ ತೊರೆಯುತೆ ॥ ಅಂತರಂಗಕೆ
ತಘನ । ಚಿಂತೆಯೊವುತೆ ॥ ೧ ॥ ಪಾಪಿನಿನಾಂ ಜನಿಸಲಯ್ಯೊ । ತಾಪವ
ದೇ ॥ ಭೂಪರಂದದ ಸಿರಿಗೆ ಧರೆಗೆ । ಲೋಪವೊದಗಿತೆ ॥ ೨ ॥ ಶ್ರೇಷ್ಠ
ಜರಿಂಗೆ ನಾನು । ಕಷ್ಟಕಾದೆನೆ ॥ ಇಷ್ಟವಸತಿಯಿಂದೆ ಭೂ । ಭ್ರಷ್ಟೆಯಾದೆನೆ
ಸುತೆಯ ಪಾಲಿಸಿರಲಿಕಿಂತು । ಗತಿಯ ತೋರ್ದನೆ ॥ ಅತಿಶಯವ
ವಂಶಕೆ । ಸತತ ಶೋಕವೆ ॥ ೪ ॥

ಅವ್ಮಾ! ನಿಮ್ಮಗಳಿಗೆ ಸರ್ವಾನರ್ಥಗಳನ್ನು ಉಂಟುಮಾಡಲು ನಾನೇ ಕಾರಣಭೂತಳಾದೆನೆ?

**ಶ್ರೀದತ್ತ**:— ಮಿತ್ರನೆ! ಏನಿದು ವಿಸ್ಮೃತಿ? ಕಾಲವಿಲಂಬದಲ್ಲಿ ಕಾರ್ಯಹಾನಿಯುಂಟಾಗುವುದಲ್ಲವೆ? ಆ ಕಡೆ ನೋಡು; ಪೂರ್ವಾದ್ರಿಯಲ್ಲಿ ಸೂರ್ಯನು ಉದಯಿಸುವ ಕಾಲವು ಸಮೀಪಗತವಾಯಿತು. ದೊರೆಗೆ ತಿಳಿದರೆ ನಿನ್ನಿಂದ ನನ್ನನ್ನೂ ಬಾಳ್ಗೊಡನು. ಪ್ರಕೃತ ತೆರಳುವುದುಚಿತವು. ಸಮಸ್ತವೂ ಪತ್ರ ಮೂಲಕ ಗೊತ್ತಾಗುವುದು.

**ಗುಣಪಾಲ**:— ಆಜ್ಞೆಯಂತೆ!

(ಎಲ್ಲರೂ ಹೊರಟುಹೋಗುವರು)

॥ ಇತಿ ಪ್ರಥಮಾಂಕಃ ॥



# ಅಥ ದ್ವಿತೀಯಾಂಕಃ

**ವಿಶ್ವಂಧರ:**— (ಸಭಾಸ್ಥಾನದಲ್ಲಿರುವನು.)

**ಕೊತವಾಲ:**— (ಪ್ರವೇಶಿಸಿ) ರಾಜೇಂದ್ರನಿಗೆ ಮಣಿವೆನು.

**ರಾಜ:**— ಪಟ್ಟಣದಲ್ಲಿ ಏನು ವಿಶೇಷವು.

**ಕೊತವಾಲ:**— ನಮ್ಮ ರಾಜಶ್ರೇಷ್ಠಿ ಗುಣಪಾಲನ ಮನೆಯಲ್ಲಿ ಯ
ಇಲ್ಲವೆಂದು ತೋರುವುದು. ಮನೆಗೆ ಬೀಗಮುದ್ರೆಮಾಡಿರುವುದು.
ಯಾನವಾಹನಾದಿ ಯಾವುದೊಂದೂ ಕಂಡುಬರುವುದಿಲ್ಲವು. ಯಾವಾ
ಇಂದ್ರಭವನದಂತೆ ಒಪ್ಪುತ್ತಿತ್ತು. ಇಷ್ಟೇ ವಿಶೇಷವಾರ್ತೆ.

**ರಾಜ:**—ನಗರರಕ್ಷಕನೇ! ಚೆನ್ನಾಗಿ ವಿಚಾರಮಾಡಿದೆಯಾ?

**ಕೊತವಾಲ:**— ಮನೆಯ ಮೂರುಮೂರು ಸುತ್ತೂ ಬಂದು ಕಿ
ಲ್ಲಿ ಸಹ ಇಣಿಕಿನೋಡಿದೆನು; ನಾನು ಒಬ್ಬನೇ ಅಲ್ಲ; ನನ್ನ ಬಾವ ಸ
ನಾಯ್ಕನೂ ಇದ್ದನು.

**ರಾಜ:**— ಸರ್ಜಪ್ಪ! ಇದು ನಿಜವೆ?

**ಸರ್ಜಪ್ಪ:**—ಪರಾಕೆ! ಖಂಡಿತವಾಗಿಯೂ ಅಹುದು. ಹಕ್ಕಿರಂಗ
ಗೂ ದಿಟ. ಅಲ್ಲದೆ ಶೆಟ್ಟರ ಪಂಚವರ್ಣದ ಕುದುರೆಯ ಕಾಸನ್ತಾರನಾದ
ವ್ ಸಾಬಿಯೂ ಕೂಡ ಶೇಟ್‌ಜೀಯವರು ನನ್ನನ್ನು ಮನೆಗಾವಲಿಗಿಕ್ಕಿ
ವರ್ಷದ ತನಕ ಬರುವುದಿಲ್ಲವೆಂದು ನಿನ್ನೆ ಹನ್ನೆರಡು ಗಂಟೆ ರಾತ್ರಿಗೆ ಗಾಡಿ
ಸಾಮಾನುಹೇರಿಕೊಂಡು ಹೋಗಿರುವರೆಂದು ಸತ್ಯವಾಗಿ ಹೇಳಿದನು.

**ರಾಜ:**— ಮಂತ್ರಿಯೇ! ಕೇಳಿದೆಯಾ?

|| ರಾಗ-ಬಿಲಹರಿ-ರೂಪಕ ||

ನೋಡು ಸಚಿವನೆ । ಗಾಢಕೃತ್ರಿಮ । ರೂಢಿಗಮುಮ || ಪ
ನೋಡದಂದದೆ । ಮೋಡಿಯಿಂದಮೆ । ಗಾಢರಾತ್ರಿಗೆ । ನಾಡನುಳಿ

ರೂಢಿಪಾಲನ ಗಾಢಹೇಳನ | ಕೀಡುಗೆಯ್ವನ || ೧ || ನೀತಿಮಾರ್ಗದೆ | ಖ್ಯಾತನಾದೊಡೆ | ನಾಥಗಧಿಕ | ಪ್ರೀತಿಪಾತ್ರೆಯ | ಸಾತಿಶಯದೊ | ಳಾತಗೊಪ್ಪಿಸ | ದೀ ತೆರಗೆಯ್ವನೆ || ೨ ||

ಸಹಸಿಯೆ! ನೀನು ಪಹರೆಯವರನ್ನು ಗುಣಪಾಲನ ಗೃಹಸಂರಕ್ಷಣಾರ್ಥವಾಗಿ ಇರಿಸುವದಲ್ಲದೆ ಅವನನ್ನು ಸಂತೈಸಿ ಕರೆದುತರಲೋಸುಗ ದೆಸೆದೆಸೆಗೂ ಸೇವಕರನ್ನು ಕಳುಹಿಸು.

**ಮಂತ್ರಿ:**—ಒಡೆಯನ ಆಜ್ಞೆಯನ್ನು ಶಿರಸಾವಹಿಸಿದೆನು. (ಹೋಗುವನು.)

---

[ಶ್ರೀದತ್ತನು ಮನೆಯಲ್ಲಿ ಯೋಚಿಸುತ್ತಿರುವನು.]

**ವಿಶಾಖೆ:**—(ಪ್ರವೇಶಿಸಿ) ಪ್ರಾಣಕಾಂತನು ಏನೋ ಮಹತ್ಕಾರ್ಯವನ್ನು ಚಿಂತಿಸುವಂತಿದೆ. ಒಳ್ಳೆಯದು. ವಿಚಾರಿಸಿನೋಡುವೆನು. (ಸಮೀಪಕ್ಕೆ ಬಂದು) ಆರ್ಯಪುತ್ರ! ಮುಖವು ಏನೋ ಮಹತ್ಕಾರ್ಯವನ್ನು ಯೋಚಿಸುವಂತೆ ಸೂಚಿಸುವುದು. ಅರ್ಧಾಂಗಿಯಲ್ಲಿ ಅದನ್ನು ನಿರೂಪಿಸಬೇಕು.

**ಶ್ರೀದತ್ತ:**—ಎರೆಯಳೆ! ರಹಸ್ಯವಿಷಯ; ಯಾರಾದರೂ ಹೊರಬಾಗಿಲಲ್ಲಿರುವರೋ ಏನೋ?

**ವಿಶಾಖೆ:**—ಯಾರೂ ಇಲ್ಲವು; ನಿರ್ಭಯವಾಗಿ ಹೇಳಬಹುದು.

**ಶ್ರೀದತ್ತ:**—ಮಧ್ಯಾಹ್ನದಲ್ಲಿ ನಮ್ಮಲ್ಲಿಗೆ ಬಿಜಯಂಗೈದ ಶ್ರೀಮದ್ವಾದಪತಾಕರಾಡಿದ ಉಕ್ತಿಯನಾಲಿಸು.

|| ರಾಗ-ಕಮಾಚ್-ತಾಳ-ಅಷ್ಟ. ||

ಆಲಿಸಿ ಕೇಳಾ ಪ್ರಿಯೆ | ಲೀಲೆಯ ಸದಯೆ || ಪಲ್ಲ || ಇಂದೆಮ್ಮ ಸದನದೆ | ಬಂದ ಶ್ರೀ ಶಿವಗುಪ್ತ | ರಂದದಿಂದಾಡಿದ | ಬಂಧುರವಚನವ || ೧ || ವಿನಮಿತೆಯಾಗಿಹ | ಧನಸಿರಿಯೊಳೆ ಮಹಾ | ಜಿನಪತಿಯಾಗುವ | ತನಯನುದಯಿಪ || ೨ || ಜಿನಮುನಿಗಳ ನುಡಿ | ಇನನಡಗಿದೊಡೇನೊ | ಘನಮೆನೆ

ಫಲಿಪುದು | ವನಜಮುಖಿಯೆ ನಿಜ || ೩ || ಗುಣನಿಧಿಯುದಯಿ
ಗುಣಪಾಲನಿಗೆ ಮುಂದೆ | ಧನಕವನಧಿಕಾರಿ | ಯೆನಿಸಲ್ಕಿನ್ನೇಂ ಗತಿ

ಅರ್ಧಾಂಗಿಯೆ! ಈ ರೀತಿಯಿಂದ ಗುರುಗಳಾದ ಶಿವಗುಪ್ತರು ಗರ್ಭ ಯನ್ನು ಕಂಡು ಶಿಷ್ಯರಾದ ಶ್ರೀಗುಪ್ತರಲ್ಲಿ ತಿಳಿಹಿದುದನ್ನು ನಾನು ಕೇಳಿ ನಾನೊಂದೆಣಿಸಿದರೆ ದೈವವೊಂದೆಣಿಸಿತು. ಪಾಪಭೀತರಾಗದೆ ಪ್ರ ದೊಡನೆಯೆ ಜನನಿಗೆ ವಂಚಿಸಿ ಶಿಶುಹತ್ಯವನ್ನು ಮಾಡಿದಲ್ಲಿ ಸಮಸ್ತ ವೂ ನಮ್ಮ ಕೈಸೇರುವುದು. ಒಳ್ಳೆಯ ಯೋಜನೆ. ನೀನು ಈ ಕಾರ್ಯದಲ್ಲಿ ಪ್ರಯತ್ನಶೀಲೆಯಾಗಿರು.

---

[ಮನೆಯೊಳಗೆ.]

**ಕಂಚುಕಿ:**—ಚಿಕ್ಕಮ್ಮನವರು ಹೊರಳಾಡುತ್ತಿರುವರು. ಊಹಿ ಪ್ರಸವವೇದನೆ ತಲೆದೋರಿರುವುದು. ಈ ಸಮಾಚಾರವನ್ನು ಒ ತಿಳಿಸುವೆನು. (ಯೆಂದು ಹೋಗುವಳು).

---

[ಚಿಕ್ಕಮನೆಯಲ್ಲಿ ವಿಶಾಖೆ ಚಿಂತಿಸುತ್ತಿರುವಳು.]

**ಕಂಚುಕಿ:**—ಒಡತಿ! ಚಿಕ್ಕಮ್ಮನವರಿಗೆ ಪ್ರಸವವೇದನೆಯುಂಟಾಗಿ ದು. ಆಜ್ಞೆಯಂತೆ ತಿಳಿಸಲು ಬಂದೆನು.

**ವಿಶಾಖೆ:**—ನೀನು ಹೋಗಿ ಒಡೆಯನಿಗೆ ತಿಳಿಸು; ನಡೆ. ಅಷ್ಟರಲ್ಲಿ ನೂ ಬರುವೆನು.

**ಕಂಚುಕಿ:** — ಆಜ್ಞೆ. [ಹೋಗುವಳು.]

---

[ಗರ್ಭಾಗಾರ. ಧನಶ್ರೀ ವೇದನೆಯಿಂದ ನರಳುತ್ತಿರುವಳು.]

**ವಿಶಾಖೆ:** —(ಪ್ರವೇಶಿಸಿ) ಚೇಟಿಯರೆ! ನೀವೆಲ್ಲರೂ ನಡೆಯಿರಿ. ನೋಡಿಕೊಳ್ಳುವೆನು. (ಎಂದು ಎಲ್ಲರನ್ನೂ ಕಳುಹಿಕೊಟ್ಟು) ಅಮ್ಮ! ಏ ತ್ತದೆ. ಹೇಳಬಾರದೆ?

ಧನಶ್ರೀ:—ಅಯ್ಯೋ! ಏನು ಹೇಳಲಿ?—

|| ರಾಗ-ನಾದನಾಮಕ್ರಿಯೆ-ರೂಪಕ ||

ತಡೆಯಲಾರೆನೆ ನಾನು । ಒಡಲ ವೇದನೆಯನು ॥ ಪಲ್ಲ ॥ ಅಡಿಗಡಿಗೇರ್ವುದೆ । ಕಡಲುಕ್ಕುವಂದದೆ ॥ ೧ ॥ ಮಡದಿರನ್ನೆಯೆ ಕೇಳು । ಇಡುವೆನೆನ್ನಲು ಕಾಲು । ನಡುಗುವುದೀಗಲು । ಬಿಡದಿಹುದೆನ್ನಲು ॥ ೨ ॥ ನುಡಿಯಲು ನಾಲಗೆ । ತೊಡರುವುದೀಗಳೆ । ಒಡನಡಗಿತೆ ಶಕ್ತಿ । ಕಡು ಬೆಡಗೆನೆ ಸತಿ ॥ ೩ ॥ ಬಿಡುವೆನೆಂದರೆ ತನು । ಜಡವಾಗಿ ಪೋದುದು । ಕಡುಪಾಪಿನಿಯಾದೆ । ಸುಡು ದುಷ್ಟ ಜನ್ಮವೆ ॥ ೪ ॥

ಅಮ್ಮಾ! ಕ್ಷಣಕ್ಷಣಕ್ಕೂ ವೇದನೆಯು ಹೆಚ್ಚುತ್ತಲೇ ಇರುವುದು. ಈ ಸಂಕಟವನ್ನು ಸಹಿಸಲಾರೆನು. ಅಯ್ಯೋ! ಕಾಪಾಡು; ಕಾಪಾಡು. (ಎಂದು ಮೂರ್ಛೆಯನ್ನು ಹೊಂದಿ ಪ್ರಸವಿಸುವಳು).

ವಿಶಾಖೆ:—ಅಮ್ಮ! ಸುಮ್ಮನಿರು. ನಾನಿರುವಲ್ಲಿ ಏಕೆ ತಾನೆ ಕಳವಳಗೊಳ್ಳುವೆ? (ಎಂದು ಸಂತವಿಸುತ್ತಿರುವಳು).

---

[ಶ್ರೀದತ್ತನು ಮನೆಯ ಹಜಾರದಲ್ಲಿ ಶತಪಥವಾಡುತ್ತಿರುವನು.]

ಕಂಚುಕಿ:—(ಪ್ರವೇಶಿಸಿ) ಚಿಕ್ಕಮ್ಮನವರ ಗರ್ಭವೇದನೆಯನ್ನು ಒಡತಿಯರು ತಮಗೆ ತಿಳಿಸುವಂತೆ ಆಜ್ಞಾಪಿಸಿದರು.

ಶ್ರೀದತ್ತ:—ಆಗಲಿ. ಬಂದೆನು. ನೀನು ಹೋಗಿ ಚಂಡಾಲರನ್ನು ಸಂಕೇತಸ್ಥಾನದಲ್ಲಿ ನಿಲ್ಲಿಸು. (ಎಂದು ಹೋಗಿ ದ್ವಾರದಲ್ಲಿ ನಿಂತು) ಪ್ರಿಯೆ! ಶಿಶು ಉದಯಿಸಿತೆ?

ವಿಶಾಖೆ:—ವಲ್ಲಭನೆ! ಅಹುದು. ಅಯ್ದು ನಿಮಿಷಗಳಿಗೆ ಮೊದಲು ತಾನೆ ಆಗಿರುವುದು. ಬಾಲಚಂದ್ರನಂತೆ ಹೊಳೆಯುತ್ತಿರುವ ಶಿಶುವನ್ನು ನೋಡುವ ಕಣ್ಣುಗಳೇ ಧನ್ಯಗಳು. ಆದರೂ ನಾನು ದೀರ್ಘಾಲೋಚನೆ

ಯಿಂದ ಎದೆಯನ್ನು ಕಲ್ಲುಮಾಡಿಕೊಂಡು ಗಂಟಲನ್ನೊತ್ತಿ ತಮ್ಮ ಬ
ಇದುವರೆಗೂ ಹಾರೈಸುತ್ತಿದ್ದೆನು.

**ಶ್ರೀದತ್ತ:**—ಬಿಳಿಯ ಬಟ್ಟೆಯಿಂದ ಸುತ್ತಿ ಬೇಗನೆ ಅದನ್ನು ಬ
ಹೊರಗೆ ಕೊಡು.

**ವಿಶಾಖೆ:**—ಇದೋ! ತಂದೆನು. ಆಕೆಯಿನ್ನೂ ಮೂರ್ಛಿತೆಯಾ
ಬಿದ್ದಿರುವಳು.

**ಶ್ರೀದತ್ತ:**—ಸರಿ! ಇಲ್ಲಿ ಕೊಡು. (ಎಂದು ಎತ್ತಿಕೊಂಡು) ಕಂ
ಇದನ್ನೂ ಈ ದ್ರವ್ಯವನ್ನೂ ಸಂಕೇತಸ್ಥಳದಲ್ಲಿರುವ ಚಂಡಾಲನ
ಕೊಟ್ಟು, ನಿರ್ಜನಪ್ರದೇಶದಲ್ಲಿ ಛೇದಿಸಿಬರತಕ್ಕುದೆಂದು ಹೇಳು.

**ಕಂಚುಕಿ:**—ಮಹಾಸ್ವಾಮಿ! ಅಪ್ಪಣೆ. (ಹೋಗುವನು.)

**ಶ್ರೀದತ್ತ:**—(ಕಪಟದಿಂದ ಗೋಳಾಡುತ್ತಿರುವನು.)

|| ರಾಗ-ಶಂಕರಾಭರಣ-ತಾಳ-ಆದಿ ||

ಸ್ವಾಮಿ || ಮುನಿದೆಯಯ್ಯೋ ಹಾ | ನೇಮಿಯೆ || ಪಲ್ಲ ||
ಯಿೂ ಸತಿಯನು | ಬಿಟ್ಟು ಪೋಗಿರೆ ಯಮನು | ಪುಟ್ಟಿದ ಬಾಲನನು |
ಕೊಂಡುಯ್ದನು || ೧ || ಧರೆಯೊಳಗೆನ್ನನು | ಭರಿತಾವಮಾನಕೆ |
ಯಾಗಿಸಿದನಯ್ಯೋ | ಹರಣಮೇಕಿರ್ಪುದೊ || ೨ ||

**ಧನಶ್ರೀ:**—(ಮೂರ್ಛೆ ತಿಳಿದು) ಅಮ್ಮಾ! ಇದೇನು? ರೋದನಶಬ್ದ

**ವಿಶಾಖೆ:**—(ಅಳುತ್ತ) ಅಯ್ಯೋ! ಏನೆಂದು ಹೇಳಲಿ? ನೀನು ಗರ್ಭ
ನೆಯಿಂದ ಮೂರ್ಛಾಗ್ರಸ್ತಳಾಗಿರುವಾಗಲೇ ಶಿಶುವು ಜನನಕ್ಕೆ ಬಂದು
ಯನ್ನೈದಿತು. ಆ ವ್ಯಥೆಯನ್ನು ತಾಳಲಾರದೆ ಯಜಮಾನರು ಅಳ
ವರು. ಎಷ್ಟು ಹೇಳಿದರೂ ಕೇಳುವುದಿಲ್ಲ!

(ಪರ್ದೆ ತೆಗೆಯುವುದು.)

ಧನಶ್ರೀ:— (ಶೋಕದಿಂದ) ಆಗಿ ಹೋದುದಕ್ಕೆ ಅತ್ತು ಫಲವೇನು? ಹಾ! ವಿಧಿಯೆ! ಇಷ್ಟು ಸಂಕಟಗೊಳಿಸಿದರೂ ನಿನಗೆ ತೃಪ್ತಿಯಾಗದೆ ಶಿಶುವನ್ನುಯ್ದು ಅಸುವನ್ನೇಕೆ ಬಿಟ್ಟೆ? ದುಷ್ಟನೆ! ನಿರ್ದಾಕ್ಷಿಣ್ಯನಾಗಿ ನನ್ನನ್ನೂ ಕರೆದುಕೊಂಡು ಹೋಗು.

॥ ರಾಗ-ಮುಖಾರಿ-ಅಷ್ಟ. ॥

ಯಾಕಣ್ಣ ಬಳಲುವೆ । ಸಾಕು ಮನದ ಚಿಂತೆ । ನಾಕಪತಿಯ ಬಿಡ । ನೀ ಕುಹಕದ ಬ್ರಹ್ಮ ॥ ಪಲ್ಲ ॥ ವಿಾರಿದ ಕಜ್ಜಕೆ । ನಾರಿಯ ದುಃಖಕೆ । ಗಾರುಗೊಂಡೊಡೆ ಕರ । ಸೇರುವುದೇ ಶಿಶು ॥ ೧ ॥ ಮುನ್ನ ಮಾಡಿದ ಕರ್ಮ । ವಿನ್ನು ತಾಂ ಸವೆಯದೆ । ಬನ್ನಬಡಿಸಿಯೆನ್ನ । ಖಿನ್ನಗೈವುದೆ ಮುಂದೆ ॥ ೨ ॥

ಪೂಜ್ಯನೆ! ಭವಿತವ್ಯತೆಯನ್ನುಲ್ಲಂಘಿಸಲು ಇಂದ್ರಚಂದ್ರಾದಿಗಳಿಗೂ ಸಾಧ್ಯವಲ್ಲವು. ಚಿಂತಿಸಿದಲ್ಲಿ ಫಲವಿಲ್ಲ. ಶೋಕವನ್ನು ಬಿಟ್ಟು ಸುಮ್ಮನಾಗು.

ಶ್ರೀದತ್ತ:—(ತನ್ನಲ್ಲಿ) ಯೋಚಿಸಿದಂತೆಯೆ ಅಂಕುರವು ಫಲವನ್ನಿತ್ತುದು. ಧನ್ಯನಾದೆನು. (ಎಂದು ಹೋಗುವನು).



[ಉಪವನ.]

ಚಂಡಾಲ:—[ಪ್ರವೇಶಿಸಿ] ಇಂದಿಗೆ ನನ್ನ ದಾರಿದ್ರ್ಯವು ತೊಲಗಿತು. ಇದರಂತೆ ಇನ್ನೂ ನಾಲ್ಕು ಕೊಲೆ ದೊರೆದಲ್ಲಿ ಲಕ್ಷಾಧಿಪನಾಗುವೆನು. ಇನ್ನು ದೈವಸಂಕಲ್ಪವಿದ್ದಂತಾಗಲಿ, ಈಗ ಒಡೆಯನ ಆಜ್ಞೆಯಂತೆ ಶಿಶುವನ್ನು ಕತ್ತರಿಸುವೆನು. (ಮುಖವಸ್ತ್ರವನ್ನು ತೆಗೆದು ನೋಡಿ) ಅಯ್ಯೋ! ಎಂತಹ ಹಸುಳೆ!

**ಕಂದ** ॥ ಎಳಮಾವಿನ ತಳಿರಂದದೆ ।
ತಳತಳಿಸುವ ಶಿಶುವನಿಂದು ಕೊಲ್ವೆನೆ ದಿಟವಿಾ ॥
ಇಳೆಯೊಳ್ ಬಾಳೆಂ ಮೇಣಿದ ।
ನಿಳೆವಾಸೊಳ್ ಮಲಗಿಸುತ್ತೆ ಪೋದಪೆನೂರ್ಗ್ಗಂ ॥

ಬಾಲಚಂದ್ರನಂತಿರುವ ಈ ಅರ್ಭಕನನ್ನು ನೋಡಿ ಕೇವಲಹಿಂಸಾಸ್ವಭಾ
ನ್ನುಳ್ಳ ನನಗೂ ಕೊಲ್ಲಲು ಕಯ್ಯೇ ಬರುವುದಿಲ್ಲವು. ಪುಣ್ಯವಿದ್ದರೆ ಬದು
(ಎಂದು ನೆಲದ ಮೇಲೆ ಮಲಗಿಸಿ ಹೋಗುವನು.)

(ಅಷ್ಟರಲ್ಲಿ ಶ್ರೀದತ್ತನ ಅಕ್ಕನ ಗಂಡನಾದ ಇಂದ್ರದತ್ತನು ಆ ಮಾರ್ಗ
ಬರುತ್ತಿರುವನು.)

ಇಂದ್ರದತ್ತ:—ಈ ವನವನ್ನು ನೋಡಲು ಮನಸ್ಸಿಗೆ ಅತ್ಯಂತ ಭ
ವಾಗುವುದು.

**ಕಂದ** ॥ ಪುಲಿಕರಡಿಕೋಣಸಿಂಗಗ |
ಳಲೆಯುತ್ತುಂ ಗರ್ಜಿಸುತ್ತುಮಿಪ್ಪುವು ವಿಪಿನಂ ॥
ಸಲೆ ನಿರ್ಜನಂ ಭಯಾಸ್ಪದ |
ಮಿಳೆಯೊಳ್ ದೌರ್ಜನ್ಯದಂತು ಭೀಕರಮುಮಮಾ ॥

(ಮುಂದೆ ಬಂದು ಶಿಶುವನ್ನು ನೋಡಿ) ಏನಾಶ್ಚರ್ಯವು! ನಿರ್ಜನಪ್ರ
ವಾದ ಈ ಅರಣ್ಯದಲ್ಲಿ ಬಾಲಸೂರ್ಯನಂತಿರುವ ಈ ಎಳಮಗುವನ್ನು ಯ
ಪಾಪಿ ತಾನೆ ಬಿಟ್ಟು ಹೋದನು? ಸ್ವಾಮಿಯೆ! ನಿನ್ನ ಮಹಿಮೆಯನ್ನು ಏನೆ
ಬಣ್ಣಿಸಲಿ? ದರಿದ್ರನಿಗೆ ನಿಕ್ಷೇಪವು ದೊರೆದಂತೆ ನನಗೆ ಪುತ್ರಸಂತಾನವಿ
ದಕ್ಕೆ ಸರಿಯಾಗಿ ಇದನ್ನು ದೊರೆಯಿಸಿದೆ. ಇಂದಿಗೆ ಜನ್ಮವೇ ಸಾರ್ಥಕ
ಯಿತು. ಧನ್ಯನಾದೆನು.

॥ ರಾಗ-ಮೋಹನ-ಅಷ್ಟತಾಳ. ॥

ಸಂತಸವಾಯಿತು | ಚಿಂತೆಯು ನೀಗಿತು ॥ ಪಲ್ಲ ॥ ಕಂತುಹ
ಸಂತಜಿನ ! ನಿಂತಿತ್ತನೀ ॥ ಶಿಶುವನು ॥ ಅನುಪಲ್ಲ ॥ ಎನ್ನಯ ಸದ
ಇನ್ನಿದನುಯ್ಯುತೆ | ಬನ್ನಬಡುವೆನ್ನ ಸತಿ | ರನ್ನೆಗೆ ನಾನಿನ್ನೀವೆನು |
ನಾಡುಗರೊಳ್ ಮುದ | ಗೂಡಿ ಪೇಳ್ದಪ್ಪೆನಿದ | ಗೂಢಗರ್ಭದಿಂದಲಿಂ
ನಾಡೆ ಶಿಶುವಾದುದೆಂದು ॥ ೨ ॥ ಜಾತಕರ್ಮಾದಿ | ರೀತಿಯ ನಡೆ
ಸಾತಿಶಯ | ಪ್ರೀತಿಯಿಂದೆ | ಜಾತನೆನೆ ಪೋಷಿಪೆನು ॥ ೩ ॥

ಭಗವತ್ಕೃಪೆಯಿಂದ ವಂಶೋದ್ಧಾರವಾಯಿತು. ಬೇಗನೆ ಮನೆಗೆ ಹೋಗಿ ಬಾಡಿರುವ ಅರ್ಭಕನನ್ನು ಕ್ಷೀರಪಾನಾದಿಗಳಿಂದ ತೃಪ್ತಿಪಡಿಸುವೆನು. (ಹೋಗುವನು.)

---

[ಇಂದ್ರದತ್ತನ ಮನೆ. ರಾಧೆ ಕುಳಿತಿರುವಳು.]

ರಾಧೆ:—ಇಂದು ಬರುವೆನೆಂದು ಹೇಳಿಹೋದ ನನ್ನ ರಮಣನು ಇನ್ನೂ ಬಾರದಿರುವ ಕಾರಣವೇನು? (ನೋಡಿ) ಓಹೊ! ಬಂದಂತಿದೆ. ಕಯ್ಯಲ್ಲಿ ಬೇರೆ ಒಂದು ಶಿಶು! ಮಾತನಾಡಿಸುವೆನು. (ಎಂದು) ಆರ್ಯ ಪುತ್ರ! ದಣಿದು ಬಂದಿರಿ. ಇದೇನಿದು?

ಇಂದ್ರದತ್ತ:—ಪ್ರಾಣಪ್ರಿಯೆ! ಇದೋ! ವಂಶೋದ್ಧಾರಕವತ್ಸನನ್ನು ತಂದಿರುವೆನು. ಪರಿಗ್ರಹಿಸಿ ಸಂತೋಷಚಿತ್ತಳಾಗು. ಈ ಮಗು ದಂಡಕಾರಣ್ಯದಲ್ಲಿ ದೊರೆಯಿತು.

ರಾಧೆ:—(ತೆಗೆದುಕೊಂಡು ಮುದ್ದಾಡಿ)

|| ರಾಗ-ಶಂಕರಾಭರಣ-ಅಷ್ಟ. ||

ಧನ್ಯೆಯಾದೆನೊ ಸುಗುಣ || ಪಲ್ಲ || ರಮಣ | ಕರುಣಾ | ಭರಣ || ಅನು || ಸುತರಿಲ್ಲದ ವಂಧ್ಯೆ | ಸತಿ ನಾನೆಂಬುದೆ | ಕ್ಷತವಾದುದಿಂದಿಗೆ | ಮತಿಯುತ ನಿನ್ನಿನೆ || ೧ || ಬಿಸಜಮುಖಿದ ದಿವ್ಯ | ಪಸುಳೆಯನೀಕ್ಷಿಸೆ | ಹಸಿವಾರಿದುದು ಮನ | ಕಸಮುಸಂತೋಷವು || ೨ || ದುಷ್ಟಮನುಜನಿಂತು | ದಿಟ್ಟಮನಸಿನಿಂದ | ಬಿಟ್ಟು ಪೋಗಲು ನಮ್ಮ | ಶ್ರೇಷ್ಠಭಾಗ್ಯಮುದಾಯ್ತು || ೩ ||

ನಾನು ಈಗಲೇ ಹೋಗಿ ದುಗ್ಧಪಾನವನ್ನು ಮಾಡಿಸಿ ತೊಟ್ಟಿಲಲ್ಲಿಟ್ಟು ತೂಗುವೆನು. (ಎಂದು ಹೋಗುವಳು).

ಇಂದ್ರದತ್ತ:—ಸೇವಕನೆ! ನೀನು ಹೋಗಿ ಪಟ್ಟಣದಲ್ಲಿಯೆಲ್ಲ ಡಂಗುರವನ್ನು ಸಾರಿಸು.

ಸೇವಕ:—ಅಜ್ಞೆಯಂತೆ. (ಹೋಗುವನು).

---

[ರಾಜವೀಧಿ.]

ದಂಡಿ: —(ಪ್ರವೇಶಿಸಿ)

ರಾಗ-ಮುಖಾರಿ-ಅಷ್ಟ.

ಸಡಗರದಿಂದೆಡೆ | ಬಿಡದೆ ನಾನೀಗಲೆ | ಹೊಡೆವೆನು ಡಂಗು
ಪೊಡವಿಯ ಜನಗಳೆ | ಗಡಣದಿ ಕೇಳ್ದಿರೆ | ಒಡನಾದ ಸಂತೋಷವ
ಒಡೆಯೇಂದ್ರದತ್ತನ | ಮಡದಿಯೊಡತಿಯೆನ್ನ | ಪಡೆದಳೆ ತಾಂ ಸುತನ
ಯರು ಮೋದದಿ | ಕೊಡುವರು ಬಹುಧನ | ಬಿಡದೀಗ ಬರಬೇಕಣ್ಣ
ಬಡಹಾರುವರಿಗೆ | ಉಡಿದಾರ ಮೊದಲಾದ | ಒಡವೆಯನೀವರಂತೆ ||
ಬೇಡುವರಿಗಿಂ | ದುಡುಗೊರೆಯುಚಿತದ | ಸಡಗರವಿರ್ಪುದಂತೆ
ನಾಡಮಕ್ಕಳಿಗೆಲ್ಲ | ಲಾಡುಚಿರೋಟಿಯ | ಗಾಡಿಯನೊರೆವುದೇನೈ |
ಡುವವರಿಗಿಂ | ತಾಡಲೆ ಬಾರದು | ಜೋಡಿನೊಳಿರ್ದಪುದೈ || ೪ ||
ಗೆಯವರಿಗೇನೊ | ಹೆಡಿಗೆಯೊಳಲ್ಲದೆ | ಹಿಡಿಹಿಡಿಯುಂಟು ಸ್ವಾ
ಗುಡಿಸುವರಿಗೆ ಮತ್ತೆ | ಪಡಿಯಕ್ಕಿ ಮುಡಿ ಕೂಡೆ | ಉಡುಪಿಯೆ
ಭೂಮಿ || ೫ ||

ಬಡವದೊಡ್ಡವರೆಂಬ ಮಾತೇ ಇಲ್ಲ. ಎಲ್ಲರೂ ಬರಬೇಕು. ಇ
ನೋಟ, ಇಂಥಾ ಆಟ, ಇಂಥಾ ಊಟ, ಇಂಥಾ ಕೂಟ, ಇಂಥಾ
ಪುಣ್ಯದಿಂದಲೇ ದೊರೆಯಬೇಕಲ್ಲದೆ, ಇಷ್ಟರ ವರೆಗೆ ಆದುದೂ
ಇನ್ನು ಆಗುವುದೂ ಏನೊ. ಬ್ರಾಹ್ಮಣರಿಗೆ ಮತ್ತಷ್ಟು ಜಾಸ್ತಿ.
ಬರಬೇಕು. (ಎಂದು ಹೋಗುವನು.)



(ಬ್ರಾಹ್ಮಣರಾಗಮನ.)

೧. ಏನು ಸ್ವಾಮಿ? ಬ್ರಹ್ಮದೇವಶಾಸ್ತ್ರಿಗಳೇ! ಇಂದ್ರದತ್ತ ಶ್ರೇ
ಮನಸ್ಸು ಧಾರಾಳವಾದುದೇ ಸರಿ.

೨. ಏನು? ನೇಮಿನಾಥೋಪಾಧ್ಯಾಯರೆ! ನೆರೆಯವರಾಗಿ ಅ

ರಂತೆ ಕೇಳುತ್ತಿರುವಿರಲ್ಲಾ? ಕಾಂಚನವು ಕೈಗೆ ಬರುವ ಮೊದಲೇ ಬುದ್ಧಿ ಇಷ್ಟು ವಿಕಾರವಾದರೆ ಕರಗತವಾದ ಮೇಲೆ ತಮ್ಮ ದಾರಿಯೇ ಬೇರೆ ಏನೊ?

ನೇಮಿನಾಥ:—ಓಹೊ! ಸರಿ ಸರಿ! ನಾನು ನಿನ್ನ ಸಿಕ್ಕಿದ ದಕ್ಷಿಣೆಯ ಲೆಕ್ಕಾಚಾರವನ್ನೇ ಮಾಡುತ್ತಿದ್ದು ವಿಸ್ಮೃತನಾಗಿ ಕೇಳಿದೆನು. ಕ್ಷಮಿಸಿ.

೩. ಓಹೊ! ಆದಿರಾಜ ಜೋಯಿಸರೊ? ನಮೋನಮಃ. ಅಪರೂಪವಾಗಿ ಸ್ವಾರಿ ದಯೆಮಾಡಿಸಿತಲ್ಲ? ಸೇರುಸೇರು ಬಂಗಾರದೊಡವುಗಳನ್ನು ಜೋಡಿಸಿಕೊಳ್ಳುವುದಕ್ಕೊ? ಸಂತೋಷ. ದಯೆಮಾಡಿಸಿ.

೪. ಏನಪ್ಪ? ಪುಟ್ಟುಸೂರಿ! ಇಂದಾದರೂ ನಮ್ಮ ಮನೋಭೀಷ್ಟವು ಪೂರ್ತಿಯಾದೀತೆ? ಶ್ರೇಷ್ಠಿಗಳೇನೋ ಲಕ್ಷ್ಮೀಪುತ್ರರೇ ಸರಿ. ಕಾಸು ಬಿಚ್ಚುವುದರಲ್ಲಿ ಮಾತ್ರ ಹೇಗೋ—ತಿಳಿಯದು.

ಪುಟ್ಟುಸೂರಿ:—ಅವರಿಗೇನಪ್ಪ ಕಡಮೆ? ಹೋದ ವರುಷ ಮಾಡಿಸಿದ ಸಂತರ್ಪಣೆಗೆ ತಾವು ದಯಮಾಡಿಸಲಿಲ್ಲವೆ? ಶಾಲುಜೋಡಿಯೊಡನೆ ವರಹವರಹ ದಕ್ಷಿಣೆ ಸಿಕ್ಕಿದಲ್ಲಿ ಈ ಮಹೋತ್ಸವದಲ್ಲಿ ವಿಚಾರಿಸತಕ್ಕ ಅಂಶವೇ ಇಲ್ಲ. ನಮಗೆ ದಾರಿದ್ರ್ಯವು ಕಾಡುವುದಕ್ಕೂ ಇಂತಹ ಒಂದೊಂದೇ ದೊರೆವುದಕ್ಕೂ ಸರಿಯಾಗಿದೆ. ಮನೆ ಸಮೀಪವಾಯಿತು. ಗಂಭೀರವಾಗಿ ನಡೆಯಿರಿ. (ಎಂದು ಪ್ರವೇಶಿಸಿ) ಆರ್ಯ! ಇಂದ್ರದತ್ತ! ಧನಕನಕಪುತ್ರಮಿತ್ರಾದ್ಯನೇಕೈಶ್ವರ್ಯಾಭಿವೃದ್ಧಿರಸ್ತು! (ಎಂದು ಹರಸುವನು.)

ಇಂದ್ರದತ್ತ:—ಕೋಶಾಧಿಪತಿಯೆ! ಈ ವಿಪ್ರವರ್ಗವನ್ನು ತಾಂಬೂಲಾದಿಗಳಿಂದ ಸತ್ಕರಿಸಿ ಯಥೇಚ್ಛಾದಾನದಿಂದ ಸಂತವಿಸು

ಕೋಶಾಧಿಪ:—ಅನುಜ್ಞೆಯಂತೆ! (ಎಂದು) ಪೂಜ್ಯರೇ! ಹೀಗೆ ದಯೆಮಾಡಿಸಬೇಕು!

ಶ್ರೀದತ್ತ:—(ಪ್ರವೇಶಿಸಿ) ಬಾಪನವರಿಗೆ ಪಂಗನೆ

ಇಂದ್ರದತ್ತ:— ಈ ಪೀಠದಲ್ಲಿ ಮಂಡಿಸಬೇಕೆಂದು ಸವಿನಯವಿಜ

ಶ್ರೀದತ್ತ:— (ಕುಳಿತು) ಮಗು ಬಾಣಂತಿಯರಿಗೆ ಮಂಗಲವಷ್ಟೆ?

ಇಂದ್ರದತ್ತ:—ದೈವಾನುಗ್ರಹದಿಂದ ಎಲ್ಲರಿಗೂ ಆರೋಗ್ಯವು. ಕಾದರ್ಶನಮಾತ್ರದಿಂದಲೇ ಹೊರಟಿರುವಿರಾಗಿ ಸಂತೋಷಗೊಂಡೆನು. ಯಲ್ಲಿ ಎಲ್ಲರಿಗೂ ಕುಶಲವಷ್ಟೆ?

ಶ್ರೀದತ್ತ:— ಪೂಜ್ಯರ ಆಶೀರ್ವಾದದಿಂದ. (ಎಂದು) ಕೂಸನ್ನು ಡಬಹುದೆ?

ಇಂದ್ರದತ್ತ:— ಅದಕ್ಕೇನು? ಒಳಗೆ ಹೋಗುವ. (ಯೆಂದು ಹೋ ಕಾಲಾನಂತರ ಹೊರಗೆ ಬಂದು ಕುಳಿತುಕೊಳ್ಳುವುದು).

ಶ್ರೀದತ್ತ:— ಸ್ವಾಮಿ! ಪ್ರಥಮಗರ್ಭಧಾರಣೆಯಲ್ಲಿ ತವರುಮನೆ ಯೇ ಹೆರತಕ್ಕದು ವಾಡಿಕೆ. ಅದಂತೂ ನಮಗೆ ದೊರೆಯಲಿಲ್ಲವು. ಲಾದರೂ ಸತೀಸುತರೊಡನೆ ಬಿಜಯಂಗೆಯ್ಯಬೇಕು.

‖ ರಾಗ-ಬ್ಯಾಗಡೆ-ಅಷ್ಟ-ತಾಳ. ‖

ಬಾವನೆ ಸಂತಯ್ಸುವ ‖ ಪಲ್ಲ ‖ ಭಾವಜರೂಪ ‖ ಅನು ‖ ದೈವ ಗದೊಳೀ ರಾ । ಜೀವಮುಖಿಗೆ ತವ । ದೇವಿಗೆ ಭಗಿನಿಗೆ । ಕುವರ ಲೀನ ‖ ೧ ‖ ಇಂದು ನಮ್ಮಯ ಕುಲಕೆ । ಕುಂದಿನಿಸಿಲ್ಲದೆ । ಕಂದ ಯನು । ಚೆಂದಗೊಳಿಸಿದನು ‖ ೨ ‖ ಅತಿಶಯದಿಂದೀಗ । ಜತೆಯ ವೆಲ್ಲರು । ಹಿತದಿಂದೆನ್ನಲ್ಲಿಗೆ । ಜತನದೆ ಬರುವುದು ‖ ೩ ‖

ಯಾವ ಕಾರ್ಯವಿಶೇಷವಿದ್ದರೂ ಬಿಟ್ಟು ಒಂದು ವಾರದ ವಿಶ್ರಾ ನ್ನು ಪಡೆದು ಬರಬೇಕೆಂಬುದೇ ನನ್ನ ಮುಖ್ಯಾಭಿಪ್ರಾಯವು.

ಇಂದ್ರದತ್ತ:— ಬಾವನವರೇ! ಈ ಬಾರಿ ಕೋಪಿಸದೆ ದಯೆ ಕ್ಷಮಿಸಬೇಕು. ಅನಿವಾರ್ಯಕಾರ್ಯವಾದುದರಿಂದ ಇಷ್ಟು ದಿವಸ

ಶವಾಗಬೇಕಾಯಿತು. ಇಲ್ಲವಾದರೆ ನಿನ್ನೆಯೇ ವಾರಾಣಸೀನಗರಕ್ಕೆ ಹೊರಡಲು ಸಿದ್ಧನಾಗಿದ್ದೆನು. ಇಂದಾದರೂ ಹೊರಡಲೇ ಬೇಕು. ತಾವು ಸಹೋದರ್ಯರ್ಭಕರೊಡನೆ ತೆರಳುವುದಕ್ಕೆ ಅಭ್ಯಂತರವಿಲ್ಲ. ಆದರೆ ಅವರನ್ನು ಬೇಗನೆ ಕಳುಹಿಸಬೇಕು.

ಶ್ರೀದತ್ತ:—ಮಾಸಾರ್ಧದಲ್ಲಿ ನಾನೇ ಅವರನ್ನು ತಂದುಬಿಡುವೆನು. (ಎಂದು) ಅಮ್ಮಾ! ತೆರಳು. ಗಂಡನ ಅನುಮತಿಯಾಯ್ತಷ್ಟೆ! (ಎಂದು ಅವರೊಡನೆ ಸ್ವಲ್ಪ ಮುಂದೆ ನಡೆದು)

ಕಂದ || ವಿಧಿಯಿಂತುಟು ಗೆಯ್ದಂ ತುಂ ||
ಬಿದ ನಿಧಿಗಂ ವಿಘ್ನನಾಗೆ ಪುಟ್ಟಿದ ಶಿಶುವಂ ||
ವಧೆಗೆಯ್ಯಲ್ಕಾನೆಳಸಲ್ |
ಪದೆದೆನ್ನಯ ಭಗಿನಿ ಪಾಲಿಪಳ್ನಿಜಶಿಶುವೊಲ್ ||

ಆಗಲಿ! ಪ್ರಕೃತ ಗೋಮುಖವ್ಯಾಘ್ರನಂತೆ ನಟಿಸಿ ಕ್ರಮೇಣ ಕಾರ್ಯವನ್ನೇ ಸಾಧಿಸುವೆನು. (ಎಂದು ಅವರೊಡನೆ ಹೋಗುವನು.)



[ಶ್ರೀದತ್ತನ ಮನೆ.]

ವಿಶಾಖೆ:—ಪುತ್ರವತಿಯಾದ ಅತ್ತಿಗೆಗೆ ವಂದನೆ.

ರಾಧೆ:—ಗುಣವತಿಯೇ! ಸುಮಂಗಲೆಯಾಗು.

ವಿಶಾಖೆ:—ಅಮ್ಮಾ! ಬಿಸಿಲ ತಾಪದಿಂದ ಶಿಶುವು ಕಂಗೆಟ್ಟಿರಬಹುದು. ಮುಖವು ಕಂದಿರುವುದು. ನಡೆ. ಕ್ಷೀರಪಾನವನ್ನು ಮಾಡಿಸುವ.

ಕಮಲಾಕ್ಷಿ:—(ಪ್ರವೇಶಿಸಿ) ಮಂಗಲಾಂಗಿಯೇ! ಮಣಿವೆನು.

ರಾಧೆ:—ಸಖಿಯೇ! ಮಂಗಲೆಯಾಗು. ಇದೇನು? ಈಗ ಬಂದೆ?

**ಕಮಲಾಕ್ಷಿ:**—ನಿನ್ನ ಪ್ರಾಣಾಪ್ತಳ ಆಜ್ಞೆಯಾಗಲು ಬಂದಿರುವೆ
ಅವಧರಿಸು.

|| ರಾಗ-ಕಾನಡ-ಅಷ್ಟ. ||

ಒಲಿಯೆ | ಜಲಜನೇತ್ರೆ || ಪಲ್ಲ || ಬಲುತವಕದಿ ಬಂದ | ನೆಲೆಯ
ನೊರೆವೆನು || ಅನು || ಕುಂದರದನೆ ಅರ | ಏಂದಶ್ರೇಷ್ಠಿಯ ಸು
ಚಂದಿರಮತಿಯೆನ್ನ | ಚಂದದೆ ಕಳಿಪಿದ | ಳೊಲಿಯೆ || ೧ || ತರು
ಮಣಿಯೆ ಕೇಳು | ಬರೆವೇಳ್ವಳೆನ್ನೊಳು | ಅರಿಯೆನು ಕಾರಣ | ಏರುವುದೆಂದ
ಮುನ್ನ || ೨ ||

ಯಾವ ಕೆಲಸವಿದ್ದರೂ ದಿನಾರ್ಧದ ವಿಶ್ರಮವನ್ನು ಹೊಂದಿ ಬ
ವುದೇ ತನ್ನಲ್ಲಿ ನಿನಗಿರುವ ಮೈತ್ರಿಗೆ ದೃಷ್ಟಾಂತವೆಂದು ಹೇಳಿರುವಳು.

**ರಾಧೆ:**—ವಿಶಾಖೆ! ಚಂದ್ರಮತಿಯು ಸಾಮಾನ್ಯ ಕಾರ್ಯಗಳಿಂದ
ಷ್ಟು ನಿರ್ಬಂಧಪಡಿಸಲಾರಳು. ಏನೋ ವಿಶೇಷವಿರಬೇಕು. ನಡೆ; ಹೋ
ಬರುವ.

**ವಿಶಾಖೆ:**—ಶಿಶುವನ್ನು ಎತ್ತಿಕೊಳ್ಳಲೆ?

**ರಾಧೆ:**—ಬೇಡ. ಸೂರ್ಯತಾಪವು ಅಧಿಕವಿರುವುದು. ಇಲ್ಲಿಂ
ಇರಲಿ. ನಾವು ಜಾಗ್ರತೆಯಾಗಿಯೆ ಬಂದುಬಿಡುವ. (ಗಮಿಸುವರು.)

**ಶ್ರೀದತ್ತ:**—(ಪ್ರವೇಶಿಸಿ) ಇದೇ ಸುದಿನವು. ತ್ವರೆಯಿಂದ ಸ್ವಕಾಯ
ಧುರಂಧರನಾಗುವೆನು.

**ಕಂದ** || ದೊರೆದಿರಲೀಯುವಕಾಶಂ |
ತುರಿಪಂಗೆಯುದುಳಿದೆನಾಗೆ ಕಿಡುಗುಂ ಕಜ್ಜಂ ||
ಅರಿಯಪ್ಪ ಶಿಶುವನೀಗಳೆ |
ಶಿರಮಂ ತರಿಯಿಪೊಡೆ ಯತ್ನಗೆಯ್ವುದುಮುಚಿತಂ ||

ಸೇವಕನೇ! ಚಂಡಾಲನನ್ನು ಕರೆ.

ಸೇವಕ: — ಅಪ್ಪಣೆ! (ಕರೆದುತರುವನು.)

ಎಲೈ! ಈ ಎಳಗೂಸನ್ನು ಅರಣ್ಯಕೆ ತೆಗೆದುಕೊಂಡುಹೋಗಿ ರಹಸ್ಯವಾಗಿ ತಲೆಯನ್ನು ಕತ್ತರಿಸಿ ಗುರುತನ್ನು ತರುವುದು. ಇದರಿಂದ ನಿನ್ನ ದಾರಿದ್ರ್ಯವೇ ಪರಿಹಾರವಾಗುವುದೆಂದು ತಿಳಿ.

ಚಾಂಡಾಲ: — ಅಪ್ಪಣೆ! ಮಹಾಸ್ವಾಮಿ! ದಯೆದಾಕ್ಷಿಣ್ಯಗಳಿಲ್ಲದೆ ತಲೆಯನ್ನು ಚೆಂಡಾಡಿಬಿಡುತ್ತೇನೆ ಬುದ್ಧಿ! (ಎಂದು ಅದನ್ನು ಎತ್ತಿಕೊಂಡು ಹೋಗುವನು.)

ಶ್ರೀದತ್ತ: — ಈಗ ತಾನೆ ಚಿತ್ತಸ್ವಾಸ್ಥ್ಯವುಂಟಾಯಿತು. ಕೃತಕೃತ್ಯನೂ ಆದೆನು. ಪ್ರಕೃತ ಕಪಟದುಃಖವನ್ನು ಆಚರಿಸುವೆನು.

ರಾಗ-ಆನಂದಭೈರವಿ-ಅಷ್ಟ.

ಇಂತು ಗೈದೆಯೊ ಹಾ ನೇವಿಾಶ | ಕಂತುನಾಶ || ಪಲ್ಲ || ಎಂತು ನಾಂ ಬಾಳಲಿ | ಚಿಂತೆಯೊಳ್ತೊಳಲಿ || ಅನು || ತರುಣೀಮಣಿಯು ಕೇಳಲಿನ್ನು | ಪರಿಯನ್ನು | ತರಹರಿಪಳೊ ಜಾಣೆ | ಜರೆವಳೊ ಕಾಣೆ || ೧ || ಕುಲದೀಪವು ಬೇಕೆನುತ | ಬಲು ಬಳಲಿ | ನಿಲದೆ ಪಡೆದ ಪುತ್ರ | ನಳಿವೊಡೆ ಚಿತ್ರ || ೨ || ಕರುಣರಹಿತನು ನೀನಾಗೆ | ಧರೆಯೊಳಗೆ | ಇರಲಾರೆನಯ್ ನಾನು | ಹರಣ ನೀಗುವೆನು || ೩ ||

(ಎಂದು ಗೋಳಾಡುತ್ತಿರುವನು. ಅಷ್ಟರಲ್ಲಿ ರಾಧೆವಿಶಾಖೆಯರು ಬರುವರು.)

ವಿಶಾಖೆ: — ಗುಣಮಣಿಯೆ! ಆಲಿಸು. ಮನೆಯಲ್ಲಿಯೇನೋ ರೋದನಶಬ್ದವು ಕೇಳುತ್ತಿರುವುದು. ಬೇಗಬೇಗನೆ ಹೋಗುವ ನಡೆ. (ಇಬ್ಬರೂ ಕೊಟ್ಟಡಿಯನ್ನು ಪ್ರವೇಶಿಸುವರು.)

ರಾಧೆ: — (ಅವಸರದೊಡನೆ) ಅಯ್ಯೋ! ನನ್ನ ಮುದ್ದುಗುವರನೆಲ್ಲಿ? ಏನಾದನು? ಎಲ್ಲಿಯೂ ಕಾಣಿಸುವುದಿಲ್ಲ. ಕುವರನೇ! ಮತ್ಪ್ರಾಣಧನವೆ! ನೀನೇನಾದೆ? (ಎಂದು ಮೈಮರೆಯುವಳು.)

---

[ವನ. ಚಂಡಾಲನು ಪ್ರವೇಶಿಸುವನು.]

**ಚಾಂಡಾಲ:**—ಸ್ವಾಮಿಾ! ನನ್ನ ಬಸಪ್ಪೊಡೆಯಾ! ಖಾವಂದರಿಗೆ
ಯ ಬುದ್ಧಿಕೊಟ್ಟು ಈ ಸಾರಿಯಾದರೂ ಸಂತೋಷಪಡಿಸುವಂತೆ ಮ
ನಿನಗೊಂದು ಹಣ್ಣುಕಾಯಿ ಒಪ್ಪಿಸುತ್ತೇನೆ. (ಕತ್ತಿಯೆತ್ತಿ) ಆಹಾ! ಎಷ್ಟು
ದ್ದಾಗಿ ನಸುನಗುವುದು. ಸೋಜಿಗವು! ಸೋಜಿಗವು!

**ಕಂದ ||** ಕಿಸಲಯುಸದೃಶಂ ದೇಹಂ |
ಬಿಸಜಾತಪ್ರಭೆಯನೇಳಿಕುಂ ವದನಮಿದೀ |
ಪಸುಳೆಯನೆಂತುಟು ಹತಿಪೆನೊ? |
ಅಸಮಾನಪ್ರೇಮಮುಕ್ಕುಮೆನ್ನೀಯೆದೆಯೊಳ್ ||

ನನ್ನಿಂದಲೂ ಕಡೆಯಾದ ಆ ದುಷ್ಟಸೆಟ್ಟಿಯು ಬಾಲಸೂರ್ಯನಂತಿ
ಈ ಮಗುವನ್ನು ಹೇಗೆ ತಾನೆ ಕತ್ತರಿಸಲಿತ್ತನೊ? ಯಾವ ಪುಣ್ಯದ ತ
ಇದನ್ನು ಹೆತ್ತಳೊ? ಎಷ್ಟಕ್ಕೂ ಹತಿಸಲಾರೆನು. ತಳಿರನ್ನು ಹಾಸಿ ಇಲ್ಲ
ಮಲಗಿಸಿ ಗುರುತಿಗೆ ಈ ಕೆಂಪಗಿರುವ ಹೊನ್ನೆಯ ಹಾಲನ್ನು ತೋರಿಸು
ಪುಣ್ಯವಿದ್ದರೆ ಯಾರಾದರೂ ಒದಗುವರು. (ಎಂದು ಹೋಗುವನು.)



[ಕಾಡಿನಲ್ಲಿ ದನಗಾಯುವ ಬಾಲಕರ ಪ್ರವೇಶ.]

|| ರಾಗ–ನವರೋಜು. ರೂಪಕ. ||

೧. ಆಡೆ ಪೋಗುವ | ಕೂಡಿ ನಾವ್ಗಳು | ನಾಡ ಬಾಲರೆಲ್ಲ
ಗಾಡಿಯಿಂದಲಿ || ೧ ||

೨. ಸುಂಡ ಬಾರೆಲೋ | ಚೆಂಡಿನಾಟಕೆ | ಬಂಡುಮಾತನಾಡೆ
ಪುಂಡನಡಗಿಪೆ || ೨ ||

೩. ಬೇಡಬೇಡೆಲೋ | ಕೇಡುನುಡಿಗಳು | ಮೂಢರಂತೆ ಒ
ನೊ | ಹೇಡಿತನದಲಿ || ೩ ||

೪. ನಾಗ ನಿಲ್ಲು ನೀಂ | ಸಾಗಬೇಡವಯ್ | ಬೇಗ ತರು
ನೋಡು | ಸಾಗಿ ಸೊಗಸನು || ೪ ||

೫. ಸಾಲಿಗಿಟ್ಟಿಹ | ಗೋಲಿ ಕಂಡೆಯಾ | ಲೀಲೆಯಿಂದ ಹೊಡೆದು ನಾನು | ಕೋಲನಾಡುವೆ || ೫ ||

ತಿಮ್ಮ: — ನಾನು ಹೋಗುತ್ತೇನೆ ಕಾಣೊ! ಹಿಂಡಿನಲ್ಲಿ ಸುಬ್ಬಮ್ಮ ಕೆಂಪಮ್ಮ ಎಂಬ ಹಸುಗಳು ಕಾಣುವುದಿಲ್ಲ. ನಿನ್ನೆಯೂ ಮನೆಯಲ್ಲಿ ಏಟು ಬಿದ್ದಿತ್ತು. (ಎಂದು ಸ್ವಲ್ಪ ದೂರ ಹೋಗಿ ಬೆಚ್ಚಿ ಬಿದ್ದು) ಎಲೊ! ನಾಗ! ರಂಗ! ಸುಂಡ! ಓಡಿ ಬನ್ನಿರೊ! ಇಲ್ಲಿಯೊಂದು ಮಗು ಬಿದ್ದಿರುವುದೋ! ಅಬ್ಬಬ್ಬಾ! ಏನು ಸೋಜಿಗ!

ಹುಡುಗರು: — (ಓಡಿಬಂದು) ಶಿವಶಿವ! ಹೇಗಪ್ಪ ಇಲ್ಲಿ ಬಂತು? ತಿಂಗಳು ಮಾವನ ಹಾಗಿರುವುದು. ನಡೆಯಿರೊ! ಮನೆಗುಯ್ದು ಒಡೆಯನಿಗೆ ಕೊಡೋಣ.

(ಎಂದು ಅದನ್ನು ಎತ್ತಿಕೊಂಡು ಹೋಗುವರು.)



[ಮನೆಯ ಸೀನ್.]

ಗೋವಿಂದ: — (ಸಿದ್ಧನಾಗಿರುವನು.)

ಹುಡುಗರು: — ಬುದ್ಧಿ! ಈ ಮಗುವನ್ನು ನೋಡಿ. ಕಾಡಿನಲ್ಲಿ ಸಿಕ್ಕಿತು.

ಗೋವಿಂದ: — ಭಲಾ! ಸಂತೋಷ! ಸಂತೋಷ! ಕೂಸು ಏನು ಚೆನ್ನಾಗಿದೆ! ಯಾವ ಪಾಪಿ ತಾನೆ ಹೀಗೆ ಮಾಡಿಬಿಟ್ಟನು? (ಬಾಲರಿಗೆ ತಿಂಡಿ ಮೊದಲಾದವುಗಳನ್ನು ಕೊಟ್ಟು)

|| ರಾಗ-ಜುಂಜೂಟಿಜಿಲ್ಲಾ -ಆದಿ. ||

ಆನಂದಪೂರಿತ| ಆನನ ನೋಡುತ | ಕಾನನದೊಳು ಬಿಟ್ಟ | ಹೀನನೆಂತಹ ದುಷ್ಟ || ೧ || ಕಂದರ್ಪರೂಪವ | ಚೆಂದದಿ ಪೋಲುವ | ಕಂದನಿಗಭಿಧಾನ | ವಿಂದು ಮಾಡಲು ಮನ || ೨ || ಚೆನ್ನೆನೆಯೋದಿಸಿ | ಚಿನ್ನದೆ ಭೂಷಿಸಿ | ಉನ್ನತನೆನಿಸುವೆ | ಮನ್ನಣೆವಡೆಯುವೆ || ೩ ||

ಜೋಯಿಸರನ್ನು ಬರಮಾಡಿ ವಿಚಾರಿಸಬೇಕಾಗಿರುವುದು. ಯಾರೆಲೋ ಅಲ್ಲಿ?

ರಂಗ: — ಯಾಕಪ್ಪ? ಬಂದೆನು.

ಗೋವಿಂದ:—ನಮ್ಮ ಜೋಯಿಸರನ್ನು ಈಗಲೇ ಕರೆದುಕೊಂಡು

ರಂಗ:—ಅಪ್ಪಣೆ! (ಎಂದು ಕರೆತರುವನು.)

ಜೋತಿಷಜ್ಞ:—ಏನು? ಗೋವಿಂದಗೌಡ! ಕುಶಲವೇ? ಕರೆಯಿ ಕಾರಣವೇನು?

ಗೋವಿಂದ: — ಹೀಗೆ ದಯಮಾಡಿಸಬೇಕು, ಈದಿನ ವನಾಂತ ಒಂದು ಮಗು ಸಿಕ್ಕಿರುವುದು. ಅದರ ಫಲವನ್ನು ಹೇಳಿ ನಾಮಕರಣಕ್ಕೆ ಯ ದಿನವನ್ನು ಅಪ್ಪಣೆಕೊಡಿಸಬೇಕು.

ಜೋಯಿಸ: — (ಶಿಶುವನ್ನು ನೋಡಿ)

**ಕಂದ ॥** ವರಲಕ್ಷಣಗಳನೀಕ್ಷಿಸೆ ।
ಸಿರಿಗಧಿಪತಿಯೆನಿಸಿ ಬಾಳ್ವ ಪುಣ್ಯಮದಿಕ್ಕುರ್ಗಂ ॥
ವರಯೋಗಮಿಕ್ಕುರ್ಗವಿಾಗಳ್ ।
ತರಳಂಗೆಣೆಗಾಣೆನಿನ್ನು ಶುಭಸಂಜಾತಂ ॥

ಗೌಡನೇ! ನಿನ್ನ ಪುಣ್ಯವನ್ನು ಏನೆಂದು ವರ್ಣಿಸಲಿ? ಇಂತಹ ಕ್ಷಣವನ್ನೂ ಇಂತಹ ರೂಪವನ್ನೂ ಇದುವರೆಗೂ ಎಲ್ಲಿಯೂ ನೋಡ ಇದಕ್ಕೆ ಖಂಡಿತವಾಗಿಯೂ ರಾಜಯೋಗವಿರುವುದು. ದೈವಯೋಗ ತಪ್ಪಿದರೂ ಕುಬೇರಸಮನಾದ ಧನಪತಿಯಾಗುವದಕ್ಕೆ ಶಂಕೆಯೇ ಇಲ್ಲ ಚಿಹ್ನವು ಮಹಾಪುರುಷರಿಗಲ್ಲದೆ ಸಾಮಾನ್ಯರಿಗೆ ಇರುವುದಿಲ್ಲ. ಆದುದ ನಾಳೆ ಸಾಯಾಹ್ನ ಒಂಭತ್ತು ಗಳಿಗೆಯ ಸಮಯಕ್ಕೆ ಕುಂಭಲಗ್ನದಲ್ಲಿ ಯಾಗುವುದರಿಂದ ಧನಕೀರ್ತಿಯೆಂಬ ಹೆಸರನ್ನಿಡು. ಆದರೆ, ಮು ಮೂರು ಕಂಟಕಗಳಿರುವುವು. ಬ್ರಾಹ್ಮಣರ ಮೂಲಕ ಗೋಹಿರಣ್ಯಾದಿ ಗಳಿಂದ ಪರಿಹರಿಸಿಕೊಳ್ಳಬೇಕು. ಅನಂತರ ದೀರ್ಘಾಯುಷಿಯಾಗುವ

ಗೋವಿಂದ: - ಅಪಾರಸಂತೋಷವಾಯಿತು. ಹಾಗೆಯೇ ತ್ತೇನೆ.



[ಶ್ರೀದತ್ತನ ಮನೆ. [ಕುಮಾರಿಯಾದ ಶ್ರೀಮತಿಯೂ ಚಂದ್ರಮತಿಯೂ ಕುಳಿತಿರುವರು.]

ಶ್ರೀಮತಿ: — ಚಂದ್ರಮತಿ! ಈಹೊತ್ತು ಮನೋನ್ಮೈರ್ಮಲ್ಯವೇ ಇಲ್ಲವು. ಚಿತ್ತಾಹ್ಲಾದವನ್ನುಂಟುಮಾಡುವ ನೆತ್ತವನ್ನಾಡುವ.

ಚಂದ್ರಮತಿ:-- ಕಾಲವು ಅತಿಕ್ರಮಿಸಿತು. ನಾಳೆ ಬರುವೆನು.

ಶ್ರೀಮತಿ --ಆಟವಾಡದೆ ಹೋದರೆ ವಾತ್ಸಲ್ಯವಿಲ್ಲವೆಂತಲೇ ಭಾವವಲ್ಲವೆ? ನಿನಗೆ ಮನ್ಮಥನಾಣೆ ಇರುವುದು.

ಚಂದ್ರಮತಿ:—ನಿನ್ನ ನಿರ್ಬಂಧವು ಯಾವಾಗಲೂ ತಪ್ಪುವುದಲ್ಲ. ಒಳ್ಳೆಯದು; ಬಾ. ಒಂದೇ ಒಂದು ಆಟ!

|| ರಾಗ-ಹಿಂದುಸ್ಥಾನಿ ಕಾಪಿ-ಅಷ್ಟ. ||

ಶ್ರೀಮತಿ:—ಇಂದುಮುಖಿ | ಚೆಂದದಿಂದ | ಬಂದುದಕೆ | ಮುಂದೆ ನಡೆ || ಪಲ್ಲ || ಚಂದ್ರಮತಿ | ಇಂದು ದಿಟ | ದಿಂದ ನಿನ್ನ | ಬಂಧಿಸಿದೆ ||ಅನು||

ಚಂದ್ರಮತಿ: — ಶ್ರೀಮತಿ | ಗುಣತತಿ | ಮಾರಸತಿ | ಸೋಲ್ವಾಕೃತಿ || ಬೇಡ ಖತಿ | ಆಡು ನೀತಿ | ಗೂಡಿ ರೀತಿ | ನೋಡೆಖ್ಯಾತಿ || ೧ ||

ಶ್ರೀಮತಿ:—ಚೆನ್ನೆ ಗುಣ | ರನ್ನೆ ಸುಮೋ | ಹನ್ನೆ ಮುದ್ದು | ಕನ್ನೆಯಿಾಗ || ಉನ್ನತಿಯ | ಪನ್ನತಿಕೆ | ಯನ್ನು ತೋರೆ | ಸನ್ನುತಾಂಗಿ || ೨ ||

ಚಂದ್ರಮತಿ:—ಚಂಚಲಾಕ್ಷಿ | ಕೊಂಚ ಬಿಡು | ಸಂಚಿನ ಪ್ರ | ವಂಚನೆಯ || ಕಂಚುಕಿಯೆ | ಮಿಂಚಿರುವ | ನಂಚೆಗೆ ವಿ | ರಿಂಚಿಯಾಣೆ || ೩ ||

[ಅಷ್ಟರಲ್ಲಿ ಶ್ರೀದತ್ತನು ಪ್ರವೇಶಿಸುವನು. ಶ್ರೀಮತಿಚಂದ್ರಮತಿಯರು ಹೋಗುವರು.]

ಶ್ರೀದತ್ತ: —(ನೋಡಿ) ಮತ್ಪ್ರಾಣಧನವಾದ ಈ ಕುಮಾರಿಗೆ ಸತ್ಕುಲಪ್ರಸೂತನಾಗಿಯೂ ಕಲಾಪಾರಂಗತನಾಗಿಯೂ ಇರುವ ವರನನ್ನು ನೋಡಿ

ಬೇಗನೆ ಪರಿಣಯವನ್ನು ಬಳೆಯಿಸಬೇಕಾಗಿರುವುದು. ಇನ್ನು ತಡಮ
ಸರ್ವಥಾ ಸರಿಯಿಲ್ಲ.

ಕಂದ ॥ ಬರಿಸಂ ಪದಿನಾರಕ್ಕುಂ ।
ಭರಯೌವನೆ ಕುವರಿಯಿಂದು ಕೂರ್ತನುರೂಪಂ ॥
ವರನೊಳೆ ಪಾಣಿಗ್ರಹಣಂ ।
ಸರಿಯಪ್ಪುದು ನೋಡೆ ತಪ್ಪದೀ ಕಡುಗಜ್ಜಂ ॥

ಅನೇಕಜಾತಕಗಳು ಬಂದಿರುವುವು. ಆವುದಾದರೂ ಒಂದಾ
ಸೇವಕನೆ! ಉಗ್ರಾಣಾಧಿಕಾರಿಯನ್ನು ಬರಮಾಡು.

ಸೇವಕ:—ಆಜ್ಞೆಯಂತೆ! (ಕರೆದುತರುವನು.)

ಶ್ರೀದತ್ತ:—ಕುವರಿಯಾದ ಶ್ರೀಮತಿಗೆ ಲಗ್ನವಾಡಬೇಕೆಂದಿರು
ಸಾಮಗ್ರಿಗಳು ಸಿದ್ಧವಾಗಿರುವುವೋ?

ಉಗ್ರಾಣಿ:—ಎಲ್ಲವೂ ಸಿದ್ಧವೇ. ಘೃತಮಾತ್ರವಿಲ್ಲ.

ಶ್ರೀದತ್ತ:—ಅದನ್ನು ನಾವು ತರಿಸುವೆವು. ಬೆದರಬೇಡ. (ಎಂದು
ನಾದ ಮದನನನ್ನು ಕರೆದು)

ಕಂದ ॥ ಮದನಾ! ನಿನ್ನಯ ಸೋದರಿ ।
ಗೊದವಿಕ್ಕುಗಂ ಜವ್ವನಂ ಸುಖೋಚಿತಕಾಲಂ ॥
ಮುದದಿಂದಾಕೆಗೆ ಪರಿಣಯ ।
ವೊದವಿಸೆ ಸಂಭಾರಸಂಗ್ರಹಾರ್ಥಂ ಪೋಪೆಂ ॥

ಇದೋ! ಖಜಾನೆಯ ಬೀಗದ ಕೈಗಳನ್ನು ಸ್ವೀಕರಿಸು. ವ
ಕಡೆ ಜಾಗರೂಕನಾಗಿರು. [ಎಂದು ತೆರಳುವನು.]



[ಗೊಲ್ಲರ ಕೇರಿ.]

ತಿಮ್ಮ:—ಹೇಗೋ! ರಂಗಣ್ಣ! ಈ ವರ್ಷದ ರಾಗಿಯ ಪೈರು ದನಿಯ ಗಂಟು ಕೊಡುವ ಹಾಗಿದೆಯೋ? ನಾಮವೋ?

ರಂಗ:—ಅದೇನು ಕೇಳುತ್ತೀಯೆ? ಏನೂ ಚೆನ್ನಾಗಿಲ್ಲ. ಹೇಗೂ ಬಡವರು ಬದುಕಿಕೊಳ್ಳುವ ಕಾಲವಲ್ಲ.

ತಿಮ್ಮ:—ಈ ಕಾಲ ಎಲ್ಲಿಯೂ ಒಂದೇ. ಪಸಾರದಲ್ಲಿ ಗಂಟಿಗೇ ಇಲ್ಲ. ಎಲ್ಲಾ ನೆಟ್ಟಗೆ. (ಅಷ್ಟರಲ್ಲಿ ಶ್ರೀದತ್ತನು ಪ್ರವೇಶಿಸುವನು.)

ರಂಗ:—ಹೀಗೆ ದಯೆಮಾಡಿಸಬೇಕು. ಯಾರೆಲೋ! ಲಕ್ಕ! ಬುದ್ಧಿಯವರು ಬಂದಿದ್ದಾರೆ. ನಾಲ್ಕು ಎಳನೀರು ತೆಗೆಯೆಲಾ! ಏನು? ಬುದ್ಧಿ! ದಯೆಮಾಡಿಸಿದಿರಿ?

ಶ್ರೀದತ್ತ:—ನಮ್ಮಲ್ಲಿ ಒಂದು ಕೆಲಸವೆಂದು ನಿಶ್ಚೈಸಿದೆ. ನೂರಿನ್ನೂರು ರೂಪಾಯಿಗಳ ಬೆಣ್ಣೆ ಬೇಕಾಗಿರುವುದು. ಎಂಟು ದಿನದೊಳಗೆ ಆಗಬೇಕು.

ರಂಗ:—ಬುದ್ಧಿ! ನಮ್ಮಿಂದೆಲ್ಲ ಅಷ್ಟರೊಳಗೆ ಒಟ್ಟುಮಾಡುವುದು ಅಸಾಧ್ಯ. ನಮ್ಮ ಗೋವಿಂದಗೌಡನ ಸಾಕಣೆಯ ಮಗನಲ್ಲಿ ಹೇಳಿದರೆ ಒಂದು ಗಂಟೆಯೊಳಗೆ ಒಟ್ಟುಮಾಡಿಕೊಟ್ಟಾನು.

ಶ್ರೀದತ್ತ:—ಗೋವಿಂದನಿಗೆ ಮಕ್ಕಳಿರುವರಲ್ಲಾ? ಸಾಕಣೆಯವನು ಯಾರು?

ರಂಗ:—ಆ ವಿಚಾರವೋ? ಬುದ್ಧಿ! ಕೆಲವು ವರ್ಷಗಳ ಹಿಂದೆ ಅವನಿಗೆ ಕಾಡಲ್ಲಿ ಒಂದು ಮಗು ಸಿಕ್ಕಿತು. ಅದನ್ನು ತಂದು ಸಾಕಿಕೊಂಡು, ಧನಕೀರ್ತಿಯೆಂದು ಹೆಸರಿಟ್ಟಿದ್ದಾನೆ.

ಶ್ರೀದತ್ತ:—ಯಾರೋ ಅವನನ್ನು ನೋಡಬೇಕಲ್ಲ?

ಲಿಂಗ:—ಆಗಲಿ! ಮಹಾಸ್ವಾಮಿ! ಇಲ್ಲಿಯೇ ಆಚೆಮನೆಯಲ್ಲಿ ಇದ್ದ ಹಾಗಿತ್ತು. ಕರೆದುಕೊಂಡು ಬರುತ್ತೇನೆ. (ಎಂದು ಹೋಗಿ ಕರತರುವನು.)

ಶ್ರೀದತ್ತ:—(ದೂರದಲ್ಲಿ ಕಂಡು) ಆಹಾ! ದೈವವೆ! ಇನ್ನೂ ನೀ
ಕುಮಾರನ ಪಕ್ಷವನ್ನೇ ವಹಿಸಿರುವೆಯಾ? ನಾನೇನು ನಿನಗೆ ಅಹಿ
ಮಾಡಿದೆನು?

ಕಂದ ॥ ಇವನವನಾಗಿಕ್ಕರ್ಂ ತಾ ।
ನಿವನಂ ಕೊಲ್ಲದೆಯೆ ಬಿಟ್ಟರೇ ಚಂಡಾಲರ್ ॥
ತವೆ ದೈವಮಾಯೆಯಿಂದೀ ।
ಕುವರಂ ಬಾಳ್ದಿರ್ಪ್ಪನಲ್ತೆ! ವೈರಮನೆಸಗಲ್ ॥

ಆಗಲಿ! ಇದಕ್ಕೆ ತಕ್ಕ ಉಪಾಯವನ್ನು ಮದನನ ಮುಖದಿಂದ
ಸುವೆನು.

ಧನಕೀರ್ತಿ:—(ಪ್ರವೇಶಿಸಿ) ಶ್ರೇಷ್ಠಿಗಳಿಗೆ ವಂದಿಸುವೆನು! ಕರೆಯಕ
ಕಾರ್ಯವೇನಿರುವುದೊ?

ಶ್ರೀದತ್ತ:—ಕುಮಾರಕನೆ! ಗೃಹಕಾರ್ಯಕ್ಕೆ ಕೆಲವು ರೂಪಾ
ನವನೀತವು ಬೇಕಾಗಿರುವುದರಿಂದ ಬರಮಾಡಿದೆನು. ಅಲ್ಲದೆ ಮಹತ್ಕಾ
ರುವುದರಿಂದ ನೀನು ಈಗಲೇ ನಮ್ಮ ಮನೆಯ ಪರ್ಯಂತವೂ ಹೋಗಿ
ಕಾಗಿರುವುದು.

॥ ರಾಗ-ಹಿಂದುಸ್ಥಾನಿ ಕಾಪಿ. ಅಷ್ಟತಾಳ. ॥

ಆಲಿಸು ಬಾಲನೆ । ಲೀಲೆಯಿಂದೊರೆವೆನು । ಜಾಲವ ಮಾ
ಮೇಲೆನೆ ಮಾಳ್ಪದೆ ॥ ೧ ॥ ಪಜ್ಜಳಿಸುವ ನಮ್ಮ । ಜ್ಜಯಿನಿಗೆ
ಕಜ್ಜವನೆಲ್ಲವ । ಸಜ್ಜಿಪ ಪತ್ರವ ॥ ೨ ॥ ತನಯಗೆ ನೀಡು । ಘನತೆ
ತ್ತ್ರರ । ವಿನನಸ್ತಕಾಲದೊ । ೞನೆಗೆ ನೀಂ ತರುವುದು ॥ ೩ ॥ ಸೃಷ್ಟಿಯೆ
ವೊ । ಲಿಷ್ಟರಿಂದಲ್ಲದೆ । ಗುಟ್ಟಿನ ಕಾರ್ಯವು । ಶ್ರೇಷ್ಠವೆನ್ನಿಸದು ॥

ಆದುದರಿಂದ ಯಾವ ಕಾರ್ಯವಿದ್ದರೂ ಒಪ್ಪೊತ್ತಿಗೆ ಸಾ
ಮಾಡಿ ನೀನೇ ಹೋಗಬೇಕು.

ಧನಕೀರ್ತಿ:—ಹಾಗೆಯೇ ಆಗಲಿ! ಶಿರಸಾ ವಹಿಸಿದೆನು. (ಪತ್ರವನ್ನು ತೆಗೆದುಕೊಂಡು ಹೋಗುವನು.)

---

[ಶ್ರೀದತ್ತನ ಮನೆಯ ಮುಂಗಡೆಯ ಉದ್ಯಾನ.]

ಧನಕೀರ್ತಿ:—ಅಯ್ಯೋ! ದೈವವೇ! ಈ ಮಧ್ಯಪಥದಲ್ಲಿ ದಾಹವನ್ನು ತಾಳಲಾರೆನು. ಎಷ್ಟು ಹುಡುಕಿದರೂ ಜಲದರ್ಶನವೇ ಆಗುವದಿಲ್ಲ. ಆ ಹಾ! ಚಂಡಾಂಶುವೇ! ನೀನೂ ನನ್ನ ಭಾಗದಲ್ಲಿ ಸ್ಥಾವರಕ್ಕಿಂತಲೂ ಕಡೆಯಾಗಿರುವೆಯ? (ಮುಂದೆ ನಡೆದು) ದಯಾಮೂರ್ತಿಯೆ! ನಿನ್ನ ಕೃಪೆಯನ್ನು ಏನೆಂದು ಬಣ್ಣಿಸಲಿ?

**ಕಂದ** ॥ ಬಡವಂ ತಾನಯ್ಸಿರಿಯುಂ ।
ಕಡುಗಿವುಡಂ ಕರ್ಣಪಟುತೆಯುಂ ಜನ್ಮಾಂಧಂ ॥
ದೃಢದೃಷ್ಟಿಯ ಬೆಡಗಂ ತಾಂ ।
ಪಡೆದ ವೊಲಾಂ ಕಂಡೆನಿಂದು ಕಮಲಾಕರಮುಂ ॥

ನಿರ್ಮಲವಾಗಿರುವ ಈ ನೀರನ್ನು ಸ್ವಚ್ಛಂದವಾಗಿ ಕುಡಿದು ಮುಂದೆ ಸಾಗುವೆನು. (ಎಂದು ಹಾಗೆ ಮಾಡಿ) ಈ ಪುರೋವರ್ತಿಯಾದ ಉಪವನವು ಎಷ್ಟು ರಮಣೀಯವಾಗಿರುವುದು?

॥ ರಾಗ-ತೋಡಿ-ಅಷ್ಟ. ॥

ಎಂತು ಶೋಭಿಪುದೀ ಕ್ರೀಡಾವನ ॥ ಅ ॥ ಪ ॥ ಶಾಂತಿಯನಾಂತುದು ಮನ್ಮನ ॥ ಅನು ॥ ಎಲ್ಲಿ ನೋಡಲು ವಲ್ಲಿ । ಮೊಲ್ಲೆಮಲ್ಲಿಗೆಯಿಲ್ಲಿ । ಮೆಲ್ಲುಲಿಗೆಯ್ವ ಭೃಂಗಾವಲಿ ॥ ೧ ॥ ಸಂಪಗೆಗಿಡಗಳು । ಸೊಂಪಿನ ಸುಮದೊಳು । ಕಂಪುಗೊಂಡೆಸೆದಪುವೀಗಳು ॥ ೨ ॥ ಪಿಕಗಳ ನಾದವು । ಶುಕಸುವಿನೋದವು । ಮಿಕಗಳ ಗಡಣದ ಮೋದವು ॥ ೪ ॥ ಎಡೆಬಿಡದಿರುವುವು । ಮುಡಿವೂಗಳಿಡಿದವು । ಜಡಜಗಂಧಿಯರಿಗಾನಂದವು ॥ ೪ ॥

ಸುರೇಂದ್ರನ ನಂದನದಂತೊಪ್ಪುವ ಈ ಆರಾಮವನ್ನು ಬಿಟ್ಟು ಮು
ರಿಯಲು ಹಜ್ಜೆಯೇ ಬಾರದು. ಕೊಂಚ ಕಾಲ ಈ ಲತಾಮಂಟಪದಲ್ಲಿ
ಮಿಸಿ ಮುಂದಕ್ಕೆ ನಡೆಯುವೆನು. (ಶಯನಮಾಡುವನು.)

[ಸಖಿಯಾದ ಮೃಗಸೇನೆಯೊಡನೆ ಶ್ರೀಮತಿ ಪ್ರವೇಶಿಸುವಳು.]

**ಶ್ರೀಮತಿ:**—ಸಖಿ! ಈ ವಾಟಿಕೆಯನ್ನು ನೋಡು; ಎಷ್ಟು ರಮಣೀ
ವಾಗಿರುವುದು?

**ಸಖಿ:**—ಆಹುದು! ಅದೊ! ನೋಡು. ಆ ಕುರಂಗಿ ಸ್ವಕಾಂತನ
ಎಷ್ಟು ಪ್ರೇಮದಿಂದ ಆಲಿಂಗಿಸುವುದು! ಸಮಿಾಪದಲ್ಲಿರುವ ಸುಮನ
ಮಲ್ಲಿಕಾದಿಪುಷ್ಪಗಳಿಂದ ಅಬಲೆಯ ಚಿತ್ತವು ಚಂಚಲವಾಯಿತು. ಆಹಾ!

**ಕಂದ ||** ಕುಸುಮಾಸ್ತ್ರನಸ್ತ್ರಮೆನಿಪೀ |
ಕುಸುಮಂಗಳ ವಿಸರಮಿರದೆ ವೇಧಿಸುತಿರ್ಕ್ಕುಂ ||
ನಸೆವಣ್ಣ ಸೊಬಗುವಾಸನೆ |
ಯೆಸೆಯಲ್ ನಾಸಿಕಕೆ ನರರ ಕಣ್ಗಂ ಬಗೆಗಂ ||

ಇಂತಹ ಮದೋದ್ರೇಕಸಾಮಗ್ರಿಗಳು ದೊರೆದಲ್ಲಿ ಯಾವ ಸತಿ ತ
ಸಕಾಲದಲ್ಲಿ ಪುರುಷಾಭಾವದಿಂದಿರುವಳೊ?

**ಶ್ರೀಮತಿ:**—ಸಖಿ! ಆ ಅಶೋಕತರುವನ್ನು ನೋಡು. ಎಷ್ಟು
ದ್ದಾಗಿ ಶುಕದಂಪತಿಗಳು ಶಾಖೆಯ ಮೇಲೆ ಕುಳಿತು ತಿರ್ಯಙ್ಮುಖಗಳಾದ
ಯುಗ್ಮಯುಗ್ಮಗಳಾಗಿ ಕ್ರಮದಿಂದಿರುವುವು. ಅದರಂತೆಯೇ ನಾವು ಧವ
ವನ್ನು ಮಿಾರದೆ ಇರಬೇಕೆಂಬುದೇ ಮುಖ್ಯಾಭಿಪ್ರಾಯವಲ್ಲವೆ?

**ಸಖಿ:**—ಸಖಿ! ವಾರ್ತಾಕಲಾಪದಿಂದಲೇ ಕಾಲವು ಗಮಿಸಿತು. ನಿ
ಇಲ್ಲಿಯೇ ಕುಂದಕುಟ್ಮಲವನ್ನು ಕೊಯ್ಯುತ್ತಿರು. ನಾನು ಇನ್ನೊಂ
ಕಡೆಗೆ ಹೋಗುವೆನು.

ಶ್ರೀಮತಿ:—(ಹೂಗೊಯ್ಯುತ್ತಾ ಮುಂದೆ ನೋಡಿ) ಆಹಾ! ಈ ನವಮೋಹ ನಾಂಗನು ಯಾರಿರಬಹುದು? ಕ್ರೀಡಾನಿಮಿತ್ತದಿಂದ ಬಂದಿರುವ ದೇವಕುಮಾರನೇನು? (ಚೆನ್ನಾಗಿ ನೋಡಿ) ಮುಖಾಬ್ಜವು ಬೆಮರಿರುವುದು. ದೇವಾಂಶನಾದರೆ ಕಂದದು. ಇವನು ಯಾರೋ ಮಹಾಪುರುಷನಿರಬೇಕು!

|| ರಾಗ-ಬೇಹಾಗ್-ರೂಪಕ. ||

ಇವನಾವನೀ ಕುಮಾರ । ನವಮನ್ಮಥಾವತಾರ || ಪಲ್ಲ || ತವೆ ವೈದ್ಯುತೀ ಶರೀರ । ಭುವನೈಕಮೋಹಕಾರ || ಅನು || ಕಮಲಾಭಮಾದ ಮುಖವು । ಭ್ರಮರೋಪಮಾನಶಿಖವು । ಅಮಿತಪ್ರಭಾಜನಕವು । ವಿಮಲಾರ್ಧಚಂದ್ರನಖವು || ೧ || ತರುಣಸನು ನೋಡೆ ಬೇಗ । ಮರುಕವನು ಪೊಂದಲೀಗ । ಅರಿದಪೆನೆ ನೈಜಭಾಗ । ಪುರಹರಗೆ ಪೇಳ್ವ ಯೋಗ || ೨ ||

ಈ ದರ್ಶನವು ಲಭಿಸಬೇಕಾದರೆ ನಾನೆಷ್ಟು ಜನ್ಮದಲ್ಲಿ ತಪಸ್ಸುಮಾಡಿರುವೆನೊ? ಮಾಧವಜನಿಗಾದರೋ ಅನಂಗತ್ವದೋಷವಿರುವುದೆಂದು ವಿಧಿಯು ಅಂಗಧಾರಿಯಾದ ಮನ್ಮಥನನ್ನು ಸೃಷ್ಟಿಸಿರಬೇಕು! ಜಗನ್ಮಾತೆಯು ಇನ್ನೂ ನಾಲ್ಕು ಕಣ್ಣುಗಳನ್ನು ದಯೆಪಾಲಿಸಿದ್ದಲ್ಲಿ ಮನೋಭೀಷ್ಟವನ್ನು ಪೂರ್ತಿಮಾಡುತ್ತಿದ್ದೆನಲ್ಲವೆ? (ಪುನಃ ನೋಡಿ) ಕವಚಗಲ್ಲಿ ಮುದ್ರೆಯಿಂದೊಡಗೂಡಿದ ಪತ್ರವು ಕಾಣಬರುವುದು. ಏನಿರಬಹುದೋ? ಸಾವಧಾನೆಯಾಗಿ ನೋಡುವೆನು. [ವಿಳಾಸವನ್ನೋದಿ] ಚಿರಂಜೀವಿ ಮಹಾಬಲಕುಮಾರನಿಗೆ! [ಎಂದು ಮುದ್ರೆಯನ್ನೊಡೆದು.]

**ಕಂದ** || ಚಿರಜೀವಿಮಹಾಬಲ! ನಿನ ।
ಗಿರುವುದು ನಿಜಜನಕವರನಿನಾಶೀರ್ವಾದಂ ||
ಕರಮಿಂದಿನ ದಿನವಾರಂ ।
ಬರಮುಭಯಕ್ಷೇಮಮಪ್ಪುದಪ್ಪುದು ನಿಜದಿಂ ||

|| ರಾಗ-ಮೋಹನ-ರೂಪಕ-ತಾಳ. ||

ಕಳಿಪಿದಿವನ ಬಳಿಯ ನೋಡದೆ । ಬಳಿಸೇದ್ದುರ್ ಬಿಡದೆ || ಪಲ್ಲ ||

ಪೊಳೆವ ರೂಪು | ಗಳವ ನಿರುಕಿಸು | ಪಳಿಯದಂದದೆ | ನಿಳಯಕೆಯ್ದ
|| ಅನು || ತರಳನೀತನು | ಸಿರಿಗೆ ಧರೆಗೆ | ಪುರಕಧೀಶ | ನಿರುವ ಕಾರಣ
ಕರವ ಪಿಡಿದು | ಭರದೊಳೆರೆದು | ತರಳಗರವ | ನಿರದೆಕುಡುವುದು || ೧ ||

ಪಾಪಪಂಡಿತನಾದ ವೈಶ್ಯಾಧಮನೆ! ಈ ರೀತಿಯಾಗಿ ಹೇಗೆ ನೀನು ವ
ಮಾಡಿದೆ? ನಿನ್ನ ಕೃತ್ರಿಮಕ್ಕೆ ತಕ್ಕ ಪ್ರತಿಕ್ರಿಯೆಯನ್ನು ಮಾಡದಿದ್ದರೆ ನಾನೇ
(ಕೊಂಚಯೋಚಿಸಿ,) ಲೇಖನಿಯಿಲ್ಲ; ಮಸಿಯಿಲ್ಲ. ಆಗಲಿ! ಕಣ್ಣ ಕಾಡಿಗೆಯ
ತೆಗೆದು ಉಗುರ್ಗೊನೆಯಿಂದ ತಿದ್ದುವೆನು. (ಎಂದು ಬರೆದುನೋಡಿ,) ದುಷ್ಟ
ಷ್ಠಿಯೆ! ನನ್ನ ಕರಕೌಶಲವನ್ನೂ ಪುಣ್ಯವನ್ನೂ ನೋಡುತ್ತಿರು. (ಪತ್ರವ
ಕಂಚುಕದಲ್ಲಿಯೇ ಸ್ಥಾಪಿಸಿ) ಪುರುಷರತ್ನವೇ! ಚಿರಂಜೀವಿಯಾಗಿ ಬಾಳು! (ಎ
ನೋಡುನೋಡುತ್ತ ಹೋಗುವಳು.)

ಧನಕೀರ್ತಿ:—(ಎಚ್ಚತ್ತು,) ಸೂರ್ಯತಾಪವು ಕಡಮೆಯಾಗಿ ಮ
ಮಾರುತವು ಬೀಸುತ್ತಿರುವುದು. ಇನ್ನು ಕಾಲಯಾಪನೆಯನ್ನು ಮಾಡ
ಕಾರ್ಯಹಾನಿಯಾಗಲೂ ಬಹುದು. [ಹೋಗುವನು.]

---

[ಶ್ರೀದತ್ತನ ಮನೆ. ಮಹಾಬಲನು ಕುಳಿತಿರುವನು.]

ಧನಕೀರ್ತಿ: —(ಪ್ರವೇಶಿಸಿ,) ಕುಮಾರನಿಗೆ ವಣಿವೆನು. (ಎಂದು
ವನ್ನು ಕೊಡುವನು.)

ಮಹಾಬಲ:—(ವಿಳಾಸವನ್ನು ನೋಡಿ) ಈ ಕಡೆ ದಯೆಮಾಡಿಸಬೇ
ಪೀಠವು ಸಿದ್ಧವಾಗಿರುವುದು.—(ಎಂದು ಪತ್ರಪಾಠದಲ್ಲಿ ತೊಡಗುವನು.)

**ಕಂದ ||** ಚಿರಜೀವಿಮಹಾಬಲ! ನಿನ ||
ಗಿರುವುದು ನಿಜಜನಕವರನಿನಾಶೀರ್ವಾದಂ ||
ಕರವಿಂದಿನ ದಿನವಾರಂ |
ಬರಮುಭಯಕ್ಷೇಮಮುಪ್ಪುದಪ್ಪುದು ನಿಜದಿಂ ||

|| ರಾಗ-ಮೋಹನ-ರೂಪಕ ||

ಕಳಿಪಿದಿವನ ಬಳಿಯ ನೋಡದೆ । ಬಳಿಸೇದ್ರ್ದ ಬಿಡದೆ || ಪಲ್ಲ || ಪೊಳೆವ ರೂಪು । ಗಳ ನಿರುಕಿಸು । ಪಳಿಯದಂದದೆ । ನಿಳಯಕೆಯ್ದಿಸು || ಅನು || ತರಳನೀತನು । ಸಿರಿಗೆ ಧರೆಗೆ । ಪುರಕಧೀಶ । ನಿರುವ ಕಾರಣ || ಕರವ ಪಿಡಿದು । ಭರದೊಳೆರೆದು । ತರಳೆ ಸಿರಿಯ । ನಿರದೆ ಕುಡುವುದು || ೧ ||

ಗಿರೀಶನೇ! ನಿನ್ನ ಮಹಿಮೆಯಿಂದಲೇ ಈ ಮನ್ಮಥರತೀದಾಂಪತ್ಯವು ಸಿದ್ಧಿಯಾಗಬೇಕಲ್ಲದೆ ಪ್ರಯತ್ನದಿಂದಸದಳವು. (ತನ್ನಷ್ಟಕ್ಕೆ) ಅನುಜೆಯೆ! ನಿನ್ನ ಜನ್ಮವು ಸಾರ್ಥಕವಾಯಿತು.

|| ರಾಗ-ಜುಂಜೂಟಿಜಿಲ್ಲಾ-ಆದಿ. ||

ಭಾಮೆಯನೀ ವರಗೆ । ನೇಮದಿನೀವೆ || ಪಲ್ಲ || ಭೂಮಿಯನಾಳುವ । ಕಾಮನಾಕೃತಿಯ । ಸೋಮಸಮಾಸ್ಯನಿಗೆ । ಪ್ರೇಮದೆ ಮಿಗೆ || ೧ || ಜನಕನಾಜ್ಞೆಯೊಳು । ಘನಮುಹೂರ್ತವನು । ಗಣಕರಿನಿಡಿಸುತೀಗ । ವಿನಯದೆ ಬೇಗ || ೨ || ಜಾನಕಿಗೆಣೆಯ । ಜಾಣೆ ಶ್ರೀಮತಿಯ । ಪಾಣಿಬಂಧವಗೈವೆ ನಾನಂದದಿನೆ || ೨ ||

ಕ್ಷಿಪ್ರವಾಗಿಯೇ ನಮ್ಮ ಕುಲಪುರೋಹಿತರನ್ನು ಕರೆಯಿಸಿ ಭದ್ರಲಗ್ನವನ್ನು ನಿಶ್ಚಯಮಾಡುವೆನು. ಯಾರಲ್ಲಿ?

**ಸೇವಕ:**—ಏನಪ್ಪಣೆ?

**ಮಹಾಬಲ:**—ಪುರೋಹಿತರನ್ನು ಕರೆ.

**ಸೇವಕ:**—ಆಜ್ಞೆಯಂತೆ! (ಕರೆದುತರುವನು.)

**ಮಹಾಬಲ:**—ಪೂಜ್ಯಪಾದರಿಗೆ ವಂದಿಸುವೆನು. ಅನುಗ್ರಹಿಸಬೇಕು.

**ಪುರೋಹಿತ:**—ಗುಣನಿಧಿಯೇ! ಜಯಶೀಲನಾಗು. ಅಕಾಲದಲ್ಲಿ

ಆಮಂತ್ರಣಗೆಯ್ದ ಕಾರಣವೇನಿರುವುದು? ಆ ಕಡೆ ಪೀಠಾಗ್ರದಲ್ಲಿ ಪರಿಶೋ
ಭಿಸುವ ಮನ್ಮಥಾಕಾರನು ಯಾರಿರಬಹುದೊ?

ಮಹಾಬಲ:— ಪೂಜ್ಯರೇ! ಅದಕ್ಕಾಗಿಯೇ ಬರಮಾಡಿದೆನು. ಈ ಸ
ದರಾಂಗನಿಗೆ ನಮ್ಮ ಶ್ರೀಮತಿಯನ್ನು ಕೊಟ್ಟು ಇಂದೇ ಪಾಣಿಗ್ರಹಣಮಾಡಿ
ಬೇಕೆಂದು ತಂದೆಯಪ್ಪಣೆ. ಆದುದರಿಂದ ಒಳ್ಳೆಯ ಮುಹೂರ್ತವನ್ನು ತಾ
ನಿಶ್ಚಯಿಸಬೇಕು.

ಪುರೋಹಿತ:— ಆಗಲಿ. ಅದಕ್ಕೇನು? ಮಿಥುನ, ಸಿಂಹ, ವೃಶ್ಚಿ
ಕನ್ಯಾ,—(ಎಂದು ಬೆರಳುಗಳೆಣಿಸಿ) 'ಮನೋ ಜಯತು ಮಾಂಡವ್ಯಂ' ರಾ
ಹದಿನೈದೂವರೆ ಗಳಿಗೆಗೆ ಧನುರ್ಲಗ್ನವು ಇದ್ದಮಟ್ಟಿಗೆ ಪ್ರಶಸ್ತವಾಗಿರುವುದೆ
ವೆನು.

ಮಹಾಬಲ:—ಪೂಜ್ಯರೇ! ಆಗಲಿ! ಆ ಸಮಯಕ್ಕೆ ವೈದಿಕಮಂಡ
ಯೊಡನೆ ತಾವು ದಯಮಾಡಿಸಿ, ವಿವಾಹಕಾರ್ಯವನ್ನು ಸಾಂಗಗೊಳಿ
ಬೇಕು. ಎಲ್ಲವೂ ತಮ್ಮನ್ನೇ ಆಶ್ರಯಿಸಿರುವುದು. ಇದೇ ಆಮಂತ್ರಣವು

ಪುರೋಹಿತ:—ಬಾಧಕವಿಲ್ಲ; ಆಗಬಹುದು. ಎಲ್ಲ ಕೆಲಸಗಳನ
ನಾನೊಬ್ಬನೇ ಪೂರೈಸುವೆನು. 'ಸರ್ವೆ ಗುಣಾಃ ಕಾಂಚನಮಾಶ್ರಯಂತಿ'
ಎಲ್ಲಾ ದುಡ್ಡಿನ ಮೇಲಿದೆ. ಆಯುಷ್ಮಂತನೇ! ಮುಂಚಿತವಾಗಿ ಪುನಃ ಸಂ
ದೊಡನೆ ಕಾಣುವೆನು.

ಮಹಾಬಲ:— ಚಾರನೇ! ಸಾಯಾಹ್ನಕ್ಕೆ ಶ್ರೀಮತಿಯ ವಿವಾಹವೆಂ
ದನ್ನು ಪತ್ರ ಮೂಲಕ ತಿಳಿಸಲು ಅಸಂದರ್ಭವಾದುದರಿಂದ ಬೇಕಾದವ
ಸ್ವತಃ ತಿಳಿಪಿ ಬರುವಂತೆ ಲೇಖಕನಿಗೆ ನನ್ನ ಆಜ್ಞೆಯನ್ನು ಹೇಳು.

ಸೇವಕ:—ಆಜ್ಞೆಯಂತೆ ಮಾಡುವೆನು. (ಹೋಗುವನು.)



[ರಾಜವೀಧಿಯಲ್ಲಿ ಬ್ರಾಹ್ಮಣರು.]

**ನೇಮಿನಾಥ:**—ಏನು ಸ್ವಾಮಿ? ಗಜಪತಿ ಶಾಸ್ತ್ರಿಗಳೆ! ಆರೋಗ್ಯವೆ? ಯಾವ ಕಡೆಗೆ ಜರ್ಬಿನಿಂದ ಹೊರಟಿರುವಿರಿ?

**ಗಜಪತಿ:**—ನಮ್ಮ ಬ್ರಾಹ್ಮಣರ ಅಸೂಯೆಯಿಂದಲೇ ದಾರಿದ್ರ್ಯದೇವತೆ ಕಾಡುತ್ತಿರುವಳು; ನನ್ನ ಮದುವೆಯಲ್ಲಿ ತೆಗೆದ ಒಂದು ದೋತ್ರವಿತ್ತು; ಅದನ್ನು ಇಂದು ಧರಿಸಿದೆನು. ಅದೂ ತಮ್ಮ ಚಿತ್ತಕ್ಕೆ ಸರಿಬಾರದೆ ಹೋಯಿತು!

**ಜೋಯಿಸ:**—ಯೇನಿರಿ? ವೇದಮೂರ್ತಿಗಳೆ! ಸೆಟ್ಟರಲ್ಲಿಯ ವಿವಾಹಕ್ಕೆ ಹೊರಟಿರ? ಆಮಂತ್ರಣವಿತ್ತೆ?

**ವೇದಮೂರ್ತಿ:**—ಬಡವರಲ್ಲಿ ಆದರೆ ಆಮಂತ್ರಣವಿರಬೇಕು. ಓಲಗದಿಂದ ಬರಬೇಕು. ಶ್ರೀಮಂತರ ಕಾರ್ಯಗಳಲ್ಲಿ ಅದನ್ನು ಕಟ್ಟಿಕೊಂಡರೆ ಬಾಯಿಗೆ ಮಣ್ಣು.

**ಜೋಯಿಸ:**—ಸರಿ! ಸ್ವಾಮಿ! ಚೆನ್ನಾಗಿ ಅಪ್ಪಣೆಕೊಡಿಸಿದಿರಿ. ಮಾನವಿಲ್ಲದ ಹಣವೇತಕ್ಕೆ? ಸುಡಬಾರದೆ?

**ವೇದಮೂರ್ತಿ:**—ಈ ದುರ್ಭಿಕ್ಷಕಾಲದಲ್ಲಿ ನಮ್ಮ ಮಾನದಿಂದಲೇನು ಮೋಚಿಕೊಂಡದ್ದು? ನಡೆಯಿರಿ! ಸಾಕುಸಾಕು! (ಎಂದು ಮಂಟಪವನ್ನು ಪ್ರವೇಶಿಸುವರು.)

**ಮಹಾಬಲ:**—(ಶ್ರೀಮತಿಯೊಡನೆ ಪ್ರಕಾಶವಾಗಿ) ಎಲೌ ತಂಗಿ! ನೆರೆದಿರುವ ಪೂಜ್ಯರ ಅಗ್ರಭಾಗದಲ್ಲಿ ಈ ಧನಕೀರ್ತಿಯನ್ನು ಪತಿಯಾಗಿ ಸ್ವೀಕರಿಸು.

**ಶ್ರೀಮತಿ:**—(ಸಾನಂದದಿಂದ ಪುಷ್ಪಮಾಲಿಕೆಯನ್ನು ಧರಿಸಿ)

|| ರಾಗ-ಸುರಟಿ-ಅಷ್ಟತಾಳ. ||

ನೇಮಿನಾಥನ ತಾಮರಸಪದ । ನೇಮದಿಂ ತಾಂ ಸ್ಮರಿಪಗೆ । ಸೋಮನಿಭ ಸುಪ್ರೇಮದಾಯಕ । ಸ್ವಾಮಿ ಶ್ರೀ ಧನಕೀರ್ತಿಗೆ ‖ ೧ ‖ ಸುಂದರಾಂಗಿ

ಯ | ರಿಂದು ರಚಿಸಿದ | ಕುಂದಹಾರವ ಭರದೊಳು || ಇಂದು ಪರಮಾನ ದಿಂದಲಿ | ಬಂಧಿಸುವೆ ಕಂಧರದೊಳು || ೨ || ಚಂಡಪಿತೃಪತಿಖಂಡಿತನ ದೊ ರ್ದಂಡಕೋಮಲೆಗೊಂದಿಸೆ || ತಂಡತಂಡದೆ ದುಂಡುಮಲ್ಲಿಗೆ | ಪುಂಡರಿ ದಿನರ್ಚಿಪೆ || ೩ || ಮಾರರೂಪನ ಸೇರುವೆನು ಬಲು | ಸಾರಭೋಗವ ತ ರುವೆಂ || ವಾರಿ ಚೆಂದುಟಿಪೀರುವೆನು ನಿಜ | ನೀರನೊಳ್ಸುಖಬೀರುವೆಂ || ೪

ಧನಕೀರ್ತಿ: — ಕಾಕತಾಳೀಯನ್ಯಾಯದಂತೆ ಇಂತಹ ಸಂದರ್ಭ ದೊರೆಯಬೇಕಾದರೆ ಜನ್ಮಾಂತರಸುಕೃತವಿಶೇಷವೇ ಸರಿ.

|| ರಾಗ-ಬೇಹಾಗ್‌ಜಿಲ್ಲಾ-ಆದಿ. ||

ಬಾರೆಲೆ ಚದುರೆ | ನಾರಿಮನೋಹರೆ | ತೋರು ಸುಖವ ನೀರೆ || ಪ ಸುರಸತಿಸುಂದರಿ | ವರಕಂಬುಕಂಧರಿ | ಭರಿತಸುಗುಣಲಹರಿ || ಅನು ನಿಲ್ಲೆಲೆ ತರುಣಿ | ಪಲ್ಲವಾಧರಮಣಿ | ಸೊಲ್ಲಿಸೆ ಸಾರಮಣಿ || ಫುಲ್ಲಬಾ ಗಿಣಿ | ಸಲ್ಲಲಿತಪಾಣಿ | ಸಲ್ಲಾಪದ ಶ್ರೇಣಿ || ೧ || ಚಂದಿರವದನೆ | ಕುಂ ಸುರದನೆ | ಇಂದೀವರನಯನೆ || ಬಂಧುರತರಗಾನೆ | ಇಂದಿಗೆ ಸೋತೆ ಬಂದು ಸೇರೆಲೆ ಲಲನೆ || ೨ || (ಎಲ್ಲರೂ ಹೋಗುವರು.)

## || ಇತಿ ದ್ವಿತೀಯಾಂಕಃ ||



## ॥ ಅಥ ತೃತೀಯಾಂಕಂ ॥

[ರಾಜವೀಥಿ. ಶ್ರೀದತ್ತನು ಪ್ರವೇಶಿಸುವನು.]

ಶ್ರೀದತ್ತ:— ಇಂದಿಗೆ ನಿಷ್ಠಿತಾರ್ಥನಾದೆನು. ಇನ್ನು ಸಂತೋಷದಿಂದ ಮನೆಯನ್ನು ಸೇರುವೆನು. (ಹೋಗುತ್ತ) ಆಹಾ! ಆಶ್ಚರ್ಯವಾಶ್ಚರ್ಯವು! ಅಶುಭಸೂಚಕವಾಗಿ ವಾಮಭುಜವು ಹಾರುತ್ತಿರುವುದು. ಸಂದರ್ಭವೇನಿರುವುದೋ — ತಿಳಿಯದು.

॥ ರಾಗ-ಹಂಸಧ್ವನಿ-ರೂಪಕ. ॥

ಪರಮೇಶ । ಗಿರಿವಾಸ । ಧರೆಗೀಶ । ಪೊರೆಶ್ರೀಶ ॥ ಪಲ್ಲ ॥ ಅರಿಯೆನೀ ಪರಿ । ಯಿರವನು ಕರುಣದೆ ನೀನೊರೆ । ತರಳನೀಗಳೆ । ಹರಿಸಿದನರಿಯನೊ ಭರದೊಳೆ । ಕರುಣಾ । ಭರಣಾ । ಶರಣಾ । ವರಣಾ । ಅರಿಯೆನು ನಾನಿದರನುವನು ॥ ೧ ॥

ಅಥವಾ —

ವಿಧುವದನೆಯ । ಮೃದುಗಮನೆಯ । ಪದುಮಾಕ್ಷಿಯ । ಚದುರೆಯ ॥ ಮುದದಿನೀಗಳೆ । ಒದಗಿದ ನೀರನೊಳವಳ । ಪದುಳದಿಂದಲಿ । ಮದುವೆಯಗೆಯ್ದನೊ ತರಳ । ಪದುಮ । ವದನ । ಸದಯ । ಹದನ । ವಿದನಿನ್ನೀನೊರೆ ॥ ೨ ॥

ಯಾವ ಸಂದರ್ಭವಿರುವುದೊ? ತಿಳಿಯದೆ, ಮನವು ಕಳವಳಗೊಂಡಿಹುದು. (ಎಂದು ಮನೆಗೆ ಪ್ರವೇಶಿಸುವನು.)

ಧನಕೀರ್ತಿ:— } ಪೂಜ್ಯಪಾದರಿಗೆ ಮಣಿವೆವು.
ಶ್ರೀಮತಿ:— }

ಶ್ರೀದತ್ತ:— ವಧೂವರರಿಗೆ ಮಂಗಲವಾಗಲಿ! ಅಂತಃಪುರವನ್ನು ಸೇರಬಹುದು. ಸಮಯಬಿದ್ದಲ್ಲಿ ಪುನಃ ಕರೆಯಿಸುವೆನು. (ಎಂದು) ಯಾರಲ್ಲಿ? ಮಹಾಬಲನನ್ನು ಬರಮಾಡು.

ಮಹಾಬಲ:—(ಬಂದು) ಅಪ್ಪ! ವಂದಿಸುವೆನು.

ಶ್ರೀದತ್ತ:—

ಕಂದ ॥ ಮತಿಹೀನನೆ! ನಿನಗಾಂ ನೆರೆ ।
ಹಿತಮಂ ಗೆಯ್ಯುವದಕೆ ಯತ್ನಿಸಲ್ಕಂ ನೀನಿಂ ॥
ದತಿಮೂಢತೆಯಿಂ ವ್ರತಮಂ ।
ಹತಿಸಿದೆಯಯ್ ಹತಕ! ತೋರದಿರ್ನೀಂ ಮೊಗಮಂ ॥

ಮಹಾಬಲ:—ಪಿತೃವರ್ಯ! ಕೋಪವೇಕೆ? ಕಾರಣವರಿಯದೆ ಭ್ರಾಂ
ನಾಗಿರುವೆನು.

ಶ್ರೀದತ್ತ:—ಕಾರಣವೇ? ಕಾರಣವನ್ನು ಹೇಳಬೇಕೆ?

॥ ರಾಗ ॥

ಆಡಿದ ಕಾರ್ಯವ । ಮಾಡದ ವಿಗಡ । ಮೂಢ । ಬಾಲನೆ ॥ ಜನ
ನಾಜ್ಞೆಯನು । ಕನಿಕರವಿಲ್ಲದೆ । ಘನಮೆನೆ ಘಾತಿಸೆ । ಮನವಿಡಲಧಮ
ಮನುಜ । ಹೀನಜ ॥ ೧ ॥ ಓಲೆಯ ನೋಡದೆ । ಬಾಲೆಗೆ ಮದುವೆಯ
ಮೇಲೆನೆ ಮಾಡಿದೆ । ಕಾಲವ ನೋಡದೆ । ಕೂಳ । ನಿಶ್ಚಲ ॥ ೨ ॥ ವರನ
ಗುತೆ ಸುಖ । ಸಿರಿಪದವಾಳೆ । ಭರದಿಂದವನಂ । ಶರಣೆನ್ನುವೆನಿಜ । ಕ್ರೂರ
ಸಾದರ್ೂರ ॥ ೩ ॥

ಮಹಾಬಲ:—(ತನ್ನಷ್ಟಕ್ಕೆ) ಗುರುಶಿಷ್ಯನ್ಯಾಯದಂತೆ ಅಪರಾಧಿಯ
ದಿದ್ದರೂ ನನ್ನಲ್ಲಿ ಕ್ರೋಧೋನ್ಮತ್ತನಾದ ತಂದೆ ಯಾವ ಅನರ್ಥಕ್ಕೂ ಕ
ಸನು. (ಪ್ರಕಾಶವಾಗಿ) ಪೂಜ್ಯರೆ! ಬಾಲನಲ್ಲಿ ಇಷ್ಟು ಆಗ್ರಹಗೊಳ್ಳಬಾರದ
ಅವಧರಿಸಬೇಕು.

॥ ರಾಗ-ಹಿಂದೂಸ್ಥಾನಿಭೈರವ-ರೂಪಕ ॥

ಯಾತಕಿಂತುಟೀ ಮುನಿಸು । ರೀತಿದೋರಿ ಪಾಲಿಸು ॥ ಜಾತನೊಳ

ಶಾಂತನಾಗಿ | ಮಾತನೀಗಳಾಲಿಸು ‖ ೧ ‖ ಸ್ವಾಮಿಯಾಜ್ಞೆಯಂತೆ ನಡೆದು | ಕಾಮಸದೃಶ ರೂಪಗೆ | ಕೋಮಲಾಂಗಿ ಶ್ರೀಮತಿಯನು | ನೇಮದಿಂದಲಿತ್ತೆನೆ ‖ ೨ ‖ ಯಾದವೇಶ ಮಾಧವಂಸು | ಮೋದದಿಂದೆ ಕಾದಿರೆ ‖ ಭೇದಮಾಡಲೇಕೆ ಪೂಜ್ಯ | ಪಾದ ಪೇಳು ಬೇಗದೆ ‖ ೩ ‖

ಇದೊ! ಈ ಪತ್ರವನ್ನು ಓದಿದುದಾದರೆ ಎಲ್ಲವೂ ಗೊತ್ತಾಗುವುದು.

[ಓದಿನೋಡಿ]

ಶ್ರೀದತ್ತ:– ಪುತ್ರಶ್ರೇಷ್ಠನೆ! ನಿಷ್ಕಾರಣವಾಗಿ ದೂಷಿಸಿದೆನು. ನನಗೆ ಚಿತ್ತಚಾಂಚಲ್ಯವುಂಟಾಗಿದೆ. ಕ್ರೋಧೋನ್ಮತ್ತರಿಗೆ ವಿವೇಕಾವಿವೇಕಗಳು ತಿಳಿಯವಷ್ಟೆ! ನಡೆ. ಸಮಯಾವಸರದಲ್ಲಿ ಪುನಃ ನಿನ್ನನ್ನು ಕರೆಯಿಸುವೆನು. (ಕಳುಹಿಸಿ) ಆಹಾ! ಏನದ್ಭುತವು? ಭ್ರಮೆಯೋ ಯೇನಿದು? (ಪುನ: ಓದಿ ನಿಜನಿಜ! ಖಂಡಿತವಾಗಿಯೂ ಅಹುದು! ಇನ್ನು ಮೇಲೆ ಸೂರ್ಯನು ನಿಶ್ಚಯವಾಗಿಯೂ ಪಶ್ಚಿಮದಿಕ್ಕಿನಲ್ಲಿಯೇ ಉದಯಿಸಬಹುದು! ಇಲ್ಲವಾದರೆ ಪ್ರಾತಿಲೋಮ್ಯವಾಗಿ ಈರೀತಿಯಾಗಲು ಕಾರಣವಿರಲಿಲ್ಲ.

‖ ರಾಗ-ಕಲ್ಯಾಣಿ-ಅಷ್ಟ. ‖

ಕ್ಷೋಣಿಯೊಳು ನಾ | ಕಾಣೆನೀಪರಿಯ | ಗುಣಧಾಮಮುಕ್ತಿ | ಪ್ರಾಣನಾಥನೆ ಬಲ್ಲ | ಜಾಣುಮೆಯ ‖ ಪಲ್ಲ ‖ ವಾಣಿಪತಿ ಬಲು | ಜಾಣನಹ ಗೀ | ರ್ವಾಣವರರಾ | ತ್ರಾಣವಡಗಿಪ | ಹೂಣಿಗನ ವೊಲ್ | ಮಾಣವಕನಿರೆ | ಜಾಣ ಬರೆದನೊ | ತಾನೆ ಫಣೆಯೊಳು ‖ ೧ ‖ ಧೀರಶೌರ್ಯಗ | ಭೀರನೀ ಸುಕು | ಮಾರನಿರ್ದಪನು | ಮಾರಸದೃಶಾ | ಕಾರನಾತನ | ಚಾರುಮೂರ್ಧವನು ‖ ತರಿವೊಡೆ | ಮೂರು ಬಾರಿಗೆ | ಸಾರಿ ಬರೆದಿರೆ ಧೀರನಿವನೊಳು | ದಾರಕರುಣವ | ತೋರಲಿಂತಿದು | ಭೂರಿಚೋದ್ಯವಿ | ದಾರು ಬಲ್ಲರು ‖ ೨ ‖ ಕೋಮಲಾಂಗನು | ಶ್ರೀಮತಿಗೆ ವರ | ಕಾಮಿನೀಮಣಿಗೆ ‖ ಪ್ರೇಮದಿಂದಲಿ | ಸ್ವಾಮಿಯಾಗಲು | ನೇಮಮೇಂ ನಮಗೆ ‖ ತರಳನು ಕ್ಷೇಮಿಯಾಗಿರೆ ಭೀಮನೊಲು ನಿ | ರ್ನಾಮಮಾಡದೆ | ಬಿಡುವೆನೇನಾ |

ರಾಮುಸುಸ್ಥಿತ | ಹೈಮವತಿಗಾಂ | ನೇಮದಿಂ ಬಲಿ | ಗುಡುವೆನೀಗಳೆ || ೩

ಅವನ ಗತಿಯನ್ನು ಪೂರೈಸಿಯೇ ಬಿಡುವೆನು. ಯಾರಲ್ಲಿ? ಚಂಡಾ
ನನ್ನು ಕರೆದುಕೊಂಡು ಬಾ.

ಸೇವಕ: – ಅಪ್ಪಣೆ! (ಎಂದು ಹೋಗಿ ಕರೆದುತರುವನು.)

ಶ್ರೀದತ್ತ: — ಮಾರಿಮುಖನೆ!

**ಕಂದ ||** ಪುರಮಧ್ಯದ ಬನದೊಳ್ ಸಿಂ |
ಗರದಿಂ ನೆರೆ ಮೆರೆಗುಮೆಮ್ಮ ಕುಲದೇವಿಯ ಬಂ ||
ಧುರಭವನವರ್ಧರಾತ್ರಿಯೊ |
ಳರಸುತ್ತುಂ ಬಂದ ಮನುಜನಂ ಕೊಂದಪುದಯ್ ||

ಚಂಡಾಲ:—ಬುದ್ಧಿ! ಅದೆಷ್ಟು ದೊಡ್ಡ ಮಾತು. ಈಗಲೇ ಖಿಲ್ಲತ
ಅಪ್ಪಣೆಯಾಗಬೇಕು.

ಶ್ರೀದತ್ತ: - ಅದು ಹಸ್ತಗತವಾಯಿತೆಂದೇ ತಿಳಿ. ನಡೆ. (ಎಂದು ಕೊ
ಕಳುಹಿಸುವನು.) ಯಾರಲ್ಲಿ? ಧನಕೀರ್ತಿಯನ್ನು ಬರಮಾಡು.

ಚಾರ:—ಆಜ್ಞಾನುಸಾರ. (ಎಂದು ಹೋಗುವನು.)



[ಅಂತಃಪುರ. ಧನಕೀರ್ತಿಶ್ರೀಮತಿಯರು ಮಂಡಿಸಿರುವರು.]

ಚಾರ:— ಅಪ್ಪಣೆಯಾಯಿತು. ಸನ್ನಿಧಾನಕ್ಕೆ ತಿಳಿಸಲು ಬಂದೆನು. ಬ
ಬೇಕಂತೆ.

ಧನಕೀರ್ತಿ:—ನಡೆ. ಬಂದೆನು. ಪ್ರಿಯೆ! ನಿಮ್ಮ ತಂದೆ ನನ್ನನ್ನೇಕೆ
ಕರೆಯಿಸಿರುವನು. ಆದುದರಿಂದ, ಹೋಗಿ ಬರುವೆನು.

ಶ್ರೀಮತಿ:—ನನ್ನ ಮನಸ್ಸೇತಕ್ಕೋ ಪ್ರಬಲವಾಗಿ ಶಂಕಿಸುತ್ತಿರುವುದ

ಧನಕೀರ್ತಿ:—ಏತಕ್ಕೆ ಶಂಕಿಸುವೆ? ವಿಪರೀತವೇನೂ ನಡೆಯಲಾರದು

ಶ್ರೀಮತಿ:—ಆದರೂ ನನ್ನ ಮನಸ್ಸಿಗೆ ಸಮಾಧಾನವಿಲ್ಲ.

ಧನಕೀರ್ತಿ:— ಈ ಕಳವಳವೇತಕ್ಕೆ? ಬೇಗನೆ ಬರುವೆನು.

ಶ್ರೀಮತಿ:— ಹೇಗಾದರೂ ಆಗಲಿ! ನಾನೂ ಬರುವೆನು. ಖಂಡಿತವಾಗಿಯೂ ತಮ್ಮಿಂದ ಅಗಲಲಾರೆನು.

ಧನಕೀರ್ತಿ:—ನಿನಗೆ ತಿಳಿಯದು! ರಹಸ್ಯವಾದ ವಿಷಯವಾಗಿರಬಹುದು. ಆದುದರಿಂದ ನೀನು ಬರಕೂಡದೆನ್ನುವೆನು.

ಶ್ರೀಮತಿ:— ಪ್ರಾಣಕಾಂತನೆ! ಎಂತಹುದಾದರೂ ಆಗಿರಲಿ! ನನಗೆ ಬರುವುದಕ್ಕೇನು? ಪಿತೃಸನ್ನಿಧಿಯಲ್ಲವೆ?

ಧನಕೀರ್ತಿ: —ಕರೆಯದೆ ಬರುವುದಕ್ಕೆ ನಿನಗೇಕೆ ನಾಚುಗೆಯಿಲ್ಲ?

**ಕಂದ ||** ಪತಿಯಾಜ್ಞೆಯನುಲ್ಲಂಘಿಪ |
ಸತಿಗಂ ತಾನಪ್ಪುದಿಲ್ಲವಿಹಪರಸೌಖ್ಯಂ ||
ಹಿತಮಲ್ತಾ ಕತದಿಂ ದು |
ರ್ಗತಿಯು ಪೊಲಾಳೋಚಿಸಲ್ಕೆ ಪತಿಗಂ ಕೇಡಂ ||

ಶ್ರೀಮತಿ:—ಪ್ರಾಣಕಾಂತನೆ! ಆಲೋಚನೆಯೆರಡಿಲ್ಲ. ನಿನಗೆಲ್ಲಿ ಕೇಡು ಸಂಭವಿಸುವುದೋ ಎಂದು ನನ್ನ ಮನಸ್ಸು ಕಳವಳಪಡುವುದು. ಅಮಂಗಳವು ಪ್ರತಿಹತವಾಗಲಿ!

ಧನಕೀರ್ತಿ:— ಪ್ರಿಯೆ! ಬೆದರಬೇಡ. ಅಷ್ಟಕ್ಕೆ ಆಸ್ಪದವಿಲ್ಲ. ಬೇಗನೆ ಬಂದು ನಿನ್ನನ್ನು ಪುನಃ ನೋಡುವೆನು. (ಎಂದು ಹೋಗುವನು.)



[ಹಜಾರದಲ್ಲಿ ಶ್ರೀದತ್ತನು.]

ಧನಕೀರ್ತಿ: — ಪೂಜ್ಯರಿಗೆ ವಂದಿಸುವೆನು. ಕರೆಯಿಸಿದ ಕಾರಣವೇನು?

**ಶ್ರೀದತ್ತ:**—ಕಂದ ‖ ಕುಲಕನ್ಯೆಯುರುದ್ವಾಹದೆ ।
ಕುಲದೇವಿಗೆ ಬಲಿಯನೀವ ಪದ್ಧತಿಯುಕ್ಕ್ರಂ ‖
ಆದುದರಿಂದ—
ನಲವಿಂ ದ್ರವ್ಯಮನೊಡಗೊಂ ।
ಡಲಸದೆ ದೇಗುಲಮನೆಯ್ದಿ ಪೂಜಿಸಿ ಬಾರಾ ‖

ಈ ವಿಷಯವನ್ನು ಮಹಾಬಲನು ಮರೆದುಹೋಗಿರುವನು. ನಾ ಜ್ಞಾಪಿಸಿದೆನು.

**ಧನಕೀರ್ತಿ:**—ಅಪ್ಪಣೆಯನ್ನು ಶಿರಸಾವಹಿಸಿದೆನು. (ಎಂದು ಪೂಜಾದ್ರ ಗಳನ್ನು ತೆಗೆದುಕೊಂಡು ಹೋಗುವನು.)

---

[ರಾಜವೀಥಿ. ಮಹಾಬಲನು ಪ್ರವೇಶಿಸುವನು.]

**ಮಹಾಬಲ:**—ತಂಗಿಯಾದ ಶ್ರೀಮತಿಯ ಯೋಗ್ಯವರ ಪ್ರಾಪ್ತಿಯಿಂ ನನ್ನ ಮನಸ್ಸು ಅತ್ಯಾನಂದವನ್ನು ಹೊಂದಿರುವುದು. (ನೋಡಿ) ಇದೇನ ಬಾವನು ಬರುತ್ತಿರುವನು. ಕಯ್ಯಲ್ಲಿ ಪೂಜಾಸಾಮಗ್ರಿಗಳು. ಗಮನವ ಗೋ? ಕೇಳಿ ನೋಡುವೆನು.

‖ ರಾಗ । ಕೇತಾರಗೌಳ । ರೂಪಕ ‖

ಬಾವನೆಲ್ಲಿಗೆ । ಪೋಪುದೀ ಪರಿ । ಭಾವದಿಂದಲಿ ‖ ಪಲ್ಲ ‖ ತಾವಕಿ ನೊ । ಳೆನ್ನೊಳಾವ । ಭಾವವುಸಿರದೆ ‖ ಸಾವಧಾನನಾಗಿ ಪೋಗೆ । ಭಾವ ನಿದೆ ‖ ೧ ‖ ಕರಗಳೊಳುಪ । ಕರಣಗಳನು । ಧರಿಸಿ ಜವದೊಳು ‖ ಭ ತೋಷದೆ । ಭರದೊಳೆಯ್ದುವ । ಪರಿಯಿದೇನಿದು ‖ ೨ ‖ ಘೋರತಮದ ಧೀರತನದೆ । ಆರುಮಿಲ್ಲದೆ ‖ ದಾರಿಗಾಣದೆ । ಸಾರಿ ಪೋಪುದೆ । ಕಾ ವಿಹುದೆ ‖ ೩ ‖

ಏಕಾಕಿಗಳಾಗಿ ಅವೇಳೆಯಲ್ಲಿ ಈ ನಿರ್ಜನಪ್ರದೇಶದಲ್ಲಿ ಬರುತ್ತಿರುವುದಕ್ಕೆ ಕಾರಣವಾದರೂ ಏನು? ಅಪ್ಪಣೆಯಾಗಲಿ.

ಧನಕೀರ್ತಿ:— ಈ ಪುರೋದೃಶ್ಯಮಾನವಾದ ಅರಣ್ಯದಲ್ಲಿರುವ ಕುಲದೇವಿಯನ್ನು ಆರಾಧಿಸಿ ಬರಬೇಕೆಂದು ನಿಮ್ಮ ತಂದೆ ನನ್ನನ್ನು ಆಜ್ಞಾಪಿಸಿರುವರು.

ಮಹಾಬಲ:—ಕಾನನಪಥವು ದುರ್ಗಮ. ತಮ್ಮಿಂದಾಗದು. ನಡೆಯಿರಿ. ನಾನು ಹೋಗಿ ಅಪ್ಪಣೆಯನ್ನು ನೆರವೇರಿಸುವೆನು. (ಎಂದು ಪೂಜಾಸಾಮಗ್ರಿಗಳನ್ನು ಅವನಿಂದ ತೆಗೆದುಕೊಂಡು ಹೋಗುವನು.)

[ಮನೆಯಲ್ಲಿ ಶ್ರೀದತ್ತನು ಕುಳಿತಿರುವನು.]

ಧನಕೀರ್ತಿ:— (ಬಂದು ವಂದಿಸುವನು.)

ಶ್ರೀದತ್ತ:— ‖ ರಾಗ | ಖಮಾಚ್ | ಆದಿ ‖

ಚೀ ನೀಚನೆ | ಏನೀ ಪರಿ ನುಡಿಯಾಡುವೆ ‖ ಪಲ್ಲ ‖ ಹೀನಮಾನವ | ಮಾನಬಾಹಿರ | ಏನಗೆಯ್ದೆಯ | ಹೀನಕುಲೋದ್ಭವರಂದದೆ ‖ ೧ ‖ ಆಣೆಗೆಯ್ದುದ | ಹಾನಿಗೆಯ್ದಿರೆ | ಜಾಣನೆಂಬರೆ | ಮಾಣದೆ ಪೋಗೆಲೆ ಪಾಪಿಯೆ ‖ ೨ ‖

ಅಧಮನೆ! ನನ್ನ ಆಜ್ಞೆಯನ್ನು ಉಲ್ಲಂಘಿಸಿದ ನಿನ್ನ ಮೋರೆಯನ್ನು ನೋಡಲಾರೆನು. ನಡೆ. ಹೋಗು.

ಧನಕೀರ್ತಿ:— ಪೂಜ್ಯರ ಆಜ್ಞಾಭಾರದೊಡನೆ ಗಮಿಸಲು ಮಧ್ಯಮಾರ್ಗದಲ್ಲಿ ಮಹಾಬಲನು ಕಂಡು ಏನೆಂದರೂ ಕೇಳದೆ ಉಪಕರಣಗಳೊಡನೆ ಹೊರಟುಹೋದನು. ಈ ಅಪರಾಧವನ್ನು ಕ್ಷಮಿಸಬೇಕು. (ಎಂದು ಹೋಗುವನು.)

ಶ್ರೀದತ್ತ:— ಆಹಾ! ಪ್ರಮಾದವಾಯಿತು.

ಕಂದ ॥ ನಾನೊಂದನೆಣಿಸೆ ದೈವಂ ।
ತಾನೊಂದಂ ಗೆಯ್ವುದಯ್ಯೊ! ಮತ್ಸುತನೀಗಳ್ ॥
ಪ್ರಾಣಮನಿತ್ತನೊ ಹಾ! ಮ ।
ತ್ಪ್ರಾಣಂ ಪೋದಪುದೊ ಕಾಣೆನೆನ್ನಯ ಗತಿಯಂ ॥

ಈ ವೃತ್ತಾಂತಶ್ರವಣದಿಂದ ನನ್ನ ಹೃದಯವು ಕಳವಳಗೊಂಡು
ಇನ್ನು ತಡೆಯಲಾರೆನು. (ಎಂದು ಓಡುವನು.)

[ವನದ ಸೀನ್.]

**ಮಹಾಬಲ:**—(ಪ್ರವೇಶಿಸಿ) ಆಹಾ! ಈ ಘೋರಾರಣ್ಯವು ಮನ
ಅತ್ಯಂತಭಯವನ್ನುಂಟುಮಾಡುವುದು. (ನೋಡಿ) ಇದೇ ಆ ದೇವೀನಿಕೇತನ

ಕಂದ ॥ ಸುಂಭನಿಸುಂಭನಿಷೂದಿನಿ ।
ಜಂಭಾರಿಪ್ರಮುಖವಿಬುಧಪೋಷಿಣಿ ಜನನೀ ॥
ಶಂಭುಪ್ರಿಯೆ ಕಾತ್ಯಾಯಿನಿ ।
ಅಂಬೇ ಪರಿಪಾಲಿಸಮ್ಮ! ನಮ್ಮಂ ಸೊಗದಿಂ ॥

(ಎಂದು ಪ್ರಾರ್ಥಿಸಿ, ಗರ್ಭಗೃಹವನ್ನು ಪ್ರವೇಶಿಸುವನು.)

**ಚಂಡಾಲ:**—(ಗುಡಿಗೆ ತಲೆ ಹಾಕುತ್ತಲೇ ಭಲಾಯೆಂದು ತಲೆಯನ್ನು ಕತ್ತ
ಶಹಬಾಸ್! ಈ ಸಮಯದಲ್ಲಿ ನಾನೇ ಪ್ರತ್ಯಕ್ಷಯಮನಲ್ಲವೆ? ನನ್ನನ್ನು
ರುವ ವೀರನು ಯಾರು? (ಎಲ್ಲವೂ ನಿಶ್ಶಬ್ದ.)



[ಕಾಳಿಯ ಗುಡಿ. ಶ್ರೀದತ್ತನು ಪ್ರವೇಶಿಸುವನು.]

**ಶ್ರೀದತ್ತ:**—ಇದೇ ಆ ಕುಲದೇವಿಯ ಗರ್ಭಗೃಹವು. ಏನಾಗಿರ
ದೋ ನೋಡುವೆನು. (ಬಾಗಿಲಲ್ಲಿ ಶವದೇಹವನ್ನೆಡವಿ ಕೆಳಗೆ ಬಿದ್ದು ಸುತ್ತಲೂ ನೋ
ಅಯ್ಯೊ! ನಿಶ್ಚಯವಾಗಿಯೂ ಘಾತವಾಯಿತು. ಹಾ ಸುಗುಣನೆ!
ಮುದ್ದು ಮಗುವೆ! ಒಂದು ಮಾತನ್ನಾಡಬಾರದೆ?

॥ ರಾಗ-ಆನಂದಭೈರವಿ. ಅಷ್ಟ. ॥

ಕೆಟ್ಟೆನಯ್ಯಯ್ಯೊ ನಾಂ ಕುವರ ॥ ಪಲ್ಲ ॥ ಬಿಟ್ಟುಪೋದೆಯೊ ಮುದ್ದು ಮೋಹದ ಕುವರ ॥ ೧ ॥ ಇಷ್ಟಮಿಂದಿರೆ ನಿನಗಾಗಿ । ಇಷ್ಟಕೃತ್ಯವ ಗೈದು ನಾಗಿದೆ ನೀಗಿ ॥ ೨ ॥ ಸುಡು ಕಡುಪಾಪಿಯ ಜನ್ಮ । ಅಡ ತಿಂದಿಗೆ ಲೋಕ ಮೆರೆಡರ ಮರ್ಮ ॥ ೩ ॥ ಪರರಿಗಿಕ್ಕಿದ ಮಾಯಾಜಾಲ । ಭರದಿ ಸಿಲ್ಕಿದೆಯೇನೊ ಗತಿಹೀನ ಬಾಲ ॥ ೪ ॥ ದಶಮುಖನಿಗೆ ಸೀತೆಯಂತೆ । ಅಶನಿಯಾದೆನೆ ಎನ್ನ ಕುಲಗೋತ್ರಕಿಂತೆ ॥ ೫ ॥

ಸರ್ವಶಕ್ತನಾದ ಜ್ಞಾನಮೂರ್ತಿಯೆ! ನೀನೇ ಪ್ರತಿಪಕ್ಷದಲ್ಲಿರುವಾಗ ಮಾಡತಕ್ಕದ್ದೇನು? ಇಷ್ಟು ಅನರ್ಥಗಳಾಗುವುವೆಂದು ತಿಳಿದಿರಲಿಲ್ಲ. ಫಲಕಾಲದಲ್ಲಿ ತಾನೆ ಬುದ್ಧಿ ಅಂಕುರಿಸಿತು. ಪಾಪಿಯಾದ ವೈರಿಯನ್ನು ಬಿಟ್ಟಲ್ಲಿ ಹಾನಿಯನ್ನೆಸಗದೆ ಬಿಡೆನು; ಪ್ರಾಣತ್ಯಾಗದಲ್ಲಿಯೂ ಹಟವನ್ನು ಬಿಡೆನು. ತಕ್ಕ ಪ್ರತಿಕ್ರಿಯೆಯನ್ನು ಮಾಡಿಯೇ ಮಾಡುವೆನು. ಅದುದಾಗಲಿ! (ಹೋಗುವನು.)



[ಅಂತಃಪುರದಲ್ಲಿ ಶ್ರೀದತ್ತನೂ ಅವನ ಪತ್ನಿಯೂ.]

ಶ್ರೀದತ್ತ:—ಪ್ರಾಣರತ್ನವೆ! ಮಂಗಳೆಯಾಗು. ನಿನ್ನಲ್ಲಿ ಅಂತರ್ಯವಿರುವುದರಿಂದ ಬಂದೆನು ನೆರವೇರಿಸುವೆನೆಂದು ಭಾಷೆಕೊಟ್ಟಲ್ಲಿ ತಿಳಿಯಿಸುವೆನು.

ವಿಶಾಖೆ:—ವಲ್ಲಭನೆ! ನನ್ನ ಪ್ರಕೃತಿಯನ್ನು ಇನ್ನೂ ತಿಳಿಯಲಿಲ್ಲವೆ? ಸತಿಗೆ ಪತಿಯೇ ಭೂಷಣವು. ತಮ್ಮ ವಿಷಯದಲ್ಲಿ ಪ್ರಾಣತ್ಯಾಗವನ್ನೂ ಮಾಡುವೆನು. ಅಪ್ಪಣೆಯಾಗಲಿ!

ಶ್ರೀದತ್ತ:—

**ಕಂದ** ॥ ರಮಣಿಯೆ ಮೋಹದ ಕಣಿಯೇ ।
ಕಮಲಾಕ್ಷಿಯೆ ಸಹಿಸೆನಿನ್ನ ಶತ್ರೂಚ್ಛ್ರಯಮಂ

ಕ್ರಮದಿಂ ವಿಷಮಿತ್ತವನಂ |
ಯಮಮಂದಿರಕೆಯ್ದುವಂತೆ ನಡೆಯಿಸೆವೇಳ್ಕುಂ ||

ಇಷ್ಟು ಛಲವಿಡಿವುದಕ್ಕೆ ಕಾರಣವೇನೆಂದು ಕೇಳುವೆಯ? ನಮ್ಮ—
ಯ್ಯೋ! ನಮ್ಮ ಕುಲಭೂಷಣನಾದ ಪ್ರಿಯ ಮಹಾಬಲನು ಆ ನೀಚನಿಂ
ನಾಗಾಲಯದಲ್ಲಿ ಕೊಲ್ಲಲ್ಪಟ್ಟನು! (ಎಂದು ಮೂರ್ಚ್ಛಿತನಾದಂತೆ ಒರಗುವನು.)

**ವಿಶಾಖೆ:** — ಅಯ್ಯೋ! ಹಾ! ಕಂದ! ಹಾ! ಕಂದ!! (ಮೂರ್ಚ್ಛೆ
ಹೊಂದಿ, ಪುನಃ ಎಚ್ಚತ್ತು,)

|| ರಾಗ-ಮುಖಾರಿ-ರೂಪಕ ||

ಗತಿಗಾಣದ | ಸುತರಂದದಿ | ಹತನಾದೆಯೊ ಸುಗುಣ || ಪಲ್ಲ
ಮತಿಯಿಲ್ಲದ | ಮಾತೆಗೆ ನೀಂ | ಪಥದೋರದೆ || ಅನು || ಕರನೀಡುತ
ಸರಸಾಡುತ | ಮೆರೆದಾಡುತ | ನಗುತ | ಉರುತೋಷದಿ | ಬಾರೆನ್ನುತ |
ರೆದಪರಾರ್ ಮಹಿತ || ೧ || ಶರದಿಂದಿರ | ಕರಸುಂದರ | ವರಮೌಕ್ತಿಕಹಾ
ಪರಮಾದರ | ಭರಗಭೀರ | ಧರಿಸುವೆನಾನಾರ || ೨ || ವಿಪಿನದಲ್ಲಿ | ಗು
ತದಿಂದ | ತಪಿಪ ಪರಿಯುಗೆಯ್ಯೆ | ಶಪಿಸಿದೆಯೆ | ಕೃಪೆಯಿತ್ತೆಯೆ | ತಪನ
ದೃಶಿಪದುಮೆ || ೩ ||

(ತನ್ನಲ್ಲಿ) ಅಯ್ಯೋ! ದೈವವೇ! ವಲ್ಲಭನಿಗೆ ಇನ್ನೂ ತೃಪ್ತಿಯಾಗ
ಮಗಳ ಚೆಂದವನ್ನು ನನ್ನ ಮುಖಾಂತರ ನೋಡಬೇಕೆಂದು ಭಾಷೆತೆಗೆದುಕೊ
ಡಿರುವರು. ತಪ್ಪಿದಲ್ಲಿ ಆತ್ಮಘಾತವನ್ನೇ ಮಾಡಿಕೊಳ್ಳದಿರರು. ಮಾಡತ
ದ್ದೇನು? ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ. ಆಗ
ತಕ್ಕ ಉಪಾಯವನ್ನು ಹುಡುಕುವೆನು. (ಹೋಗುವಳು.)

[ಪರ್ದೆ ಬೀಳುವುದು.]

(ಧನಕೀರ್ತಿ ಶ್ರೀಮತಿಯರು ಸಜ್ಜೆಯಲ್ಲಿರುವರು.)

**ಧನಕೀರ್ತಿ:** — ಪ್ರಿಯೆ! ಮಂದಮಾರುತವು ಬೀಸುತ್ತಿರುವುದು. ಅಯ

ಘಂಟೆಯಾಯಿತು. ಇನ್ನು ತಡಮಾಡದೆ ಕಾಲೋಚಿತವಾದ ಉದಯರಾಗವನ್ನು ಹಾಡುವ.

|| ರಾಗ-ಬಿಲಹರಿ-ಅಷ್ಟ. ||

ಉದಯಾಚಲದೊಳಗೆ ! ಪದುಮಾಕ್ಷನುೂಡಿದ || ಪಲ್ಲ || ತಿಮಿರವುಡಗಿತು | ಕುಮುದ ಕೊರಗಿತು | ಹಿಮಕರನು ಕಳೆಗುಂದಿದಂ || ಭ್ರಮರಚಯಮುಂ ಸುಮವಿಸರದೊಳ್ | ಭ್ರಮಿಸಿ ಮಧುವೀಂಟುವುದು ಮೋದದೆ || ೧ || ಖಗನಿಚಯಗಳ್ | ನಗಕುಜಗಳೊಳ್ | ಜಗದೆ ಜಾಗರಗೆಯ್ಯುವೋಲ್ | ಬಗೆಬಗೆಯದನಿ | ಯಗಲದಿಂ ನಿಜ | ನಗರಜನಮಂ ತೋಷಿಪುವು ಬಲು || ೨ || ಮಾರವೀರನು | ಭೂರಿ ಶರವನು | ಬೀರಿ ತೆರಳ್ದನು ಭರದೊಳೆ || ಜಾರಚೋರರು ವಿಾರೆ ದುಃಖವು | ಸೇರಿದರು ನಿಜಧಾಮವನುಮಿಗೆ || ೩ || ಕಂಜನಯನೆಯ ರಂಜಿನಡೆಯುಲ್ | ರಂಜಿಪುದು ಕಿಂಕಿಣಿರವಂ || ಪುಂಜಪುಂಜದಿ ಮಂಜುವಾದ್ಯವು | ಸಿಂಜಿಪುದು ಜಿನಚೈತ್ಯಗೇಹದೆ || ೪ ||

**ಕಮಲೆ:**—(ಪ್ರವೇಶಿಸಿ) ಸಖಿ! ಪೂರ್ವಾಹ್ನಕ್ರಿಯಾಕಾಲವು ಪ್ರಾಪ್ತವಾಗಿವುರುದು. ದಯೆಮಾಡಿಸಬೇಕೆಂದು ಕಾದಿರುವೆವು.

**ಶ್ರೀಮತಿ:**— ವಲ್ಲಭನೆ! ಬಿಜಯಂಗೆಯಬೇಕು.

**ಸಖಿ:** —(ಪ್ರವೇಶಿಸಿ) ಶ್ರೀಮತಿ! ದೊಡ್ಡಮ್ಮನವರು ಬಹಿಷ್ಠೆಯಾಗಿರುವರು. ಆದುದರಿಂದ ಮರೆಯದೆ ನೀನು ಕಾರ್ಯವಶಾದ್ಗವಿಾಸಿದ ಶ್ರೇಷ್ಠಿಗಳು ಬಂದೊಡನೆಯೇ ಅವರಿಗಾಗಿ ಮಡಗಿರುವ ಚಿಕ್ಕ ಲಡ್ಡುಗೆಯನ್ನೂ, ನಿನ್ನ ವಲ್ಲಭನಿಗೆ ತೋರಲಡ್ಡುಗೆಯನ್ನೂ ಕೊಡುವಂತೆ ಹೇಳಿದರು.

**ಶ್ರೀಮತಿ:**— ಹಾಗೆಯೇ ಮಾಡುವೆನು. ತಿಳಿಸು. (ಎಂದು ತನ್ನಷ್ಟಕ್ಕೆ) ಜನನಿಯಾಜ್ಞೆಯಂತೆ ಭೇದಬುದ್ಧಿಯನ್ನು ಮಾಡಲು ನನ್ನ ಯೋಗ್ಯತೆಗೆ

ಬೆಲೆಯಾಗುವುದು. ಗುಣಪರೀಕ್ಷಾರ್ಥವಾಗಿ ಹೇಳಿದರೂ ಹೇಳಿರಬಹುದು ಅವಳಾಜ್ಞೆಯನ್ನು ತಂದೆಯಲ್ಲಿಯೇ ಪೂರಯ್ಸುವೆನು. (ಎಂದು ಪತಿಯೊಡ ಹೋಗುವಳು.)



[ಚಾವಡಿಯಲ್ಲಿ ಶ್ರೀದತ್ತನು.]

ಶ್ರೀಮತಿ:—(ಪ್ರವೇಶಿಸಿ) ತಂದೆಯೆ! ವಂದಿಸುವೆನು. ಈ ಭಕ್ಷ್ಯವನ ಸ್ವೀಕರಿಸಬೇಕೆಂದು ಅಮ್ಮನು ಹೇಳಿದಳು.

ಶ್ರೀದತ್ತ: — ಆಗಲಮ್ಮ! ಕೊಡು. (ಎಂದು ಅದನ್ನು ತಿಂದು) ಅಯ್ಯೊ ಸಂಕಟವಾಗುವುದು! ತಡೆಯಲಾರೆನು. (ಹೊರಳಾಡುತ್ತಾ)

|| ರಾಗ-ತೋಡಿ-ರೂಪಕ ||

ತಾಳಲಾರೆನೆ | ನಳಿತಾಯತಾಕ್ಷನೆ || ಪಲ್ಲ || ಜ್ವಲನಸದೃಶತಾ ಗೊಂಡು | ಜ್ವಲಿಸುತಿಹುದು ಹೃದಯವೆಲ್ಲ | ಗಲವು ಶಿಥಿಲಶುಷ್ಕವಾಯ ಬಲವುಡುಗಿತು ತೊಲಗೆನಹಾ || ೧ || (ಬಿದ್ದು ಪುನ:) ಚಲಿಸದಿಹವು ಲೋ ನಗಳು | ನಲಿವುದಯ್ಯೋ ಪ್ರಾಣಧಮನಿ | ಸಲಿಲಧಾರೆಯಂತೆ ಬೆಮರು |ಗ ಪುದಮಮ! ಅನವರತವು || ೨ || ಇಳೆಯ ಋಣವು ತೀರಿತಿಂದು | ಅಳಿ ಭರದೆ ಸೆಳೆವುದಕಟ | ಬಲವತೋರಿ ನರಕವನ್ನು | ಗಳಿಸಿಕೊಂಡೆ ನಯೊ ನಾನು || ೩ || (ಎಂದು ಒದೆದಾಡಿ ಪ್ರಾಣವನ್ನು ಬಿಡುವನು.)

ಶ್ರೀಮತಿ:—(ಗಾಬರಿಯಿಂದ ಕೈಕಾಲುಗಳಂ ಮುಟ್ಟಿ) ಆಹಾ! ಕೆಟ್ಟೆನಲ ಸಖಿಯೆ! ಮಜ್ಜನನಿಮಿತ್ತದಿಂದ ಹೋಗಿರುವ ಜನನಿಗೆ ಬೇಗನೇ ತಿಳಿಸು. ಲೋ ಕನಾಯಕಿಯೆ! ಕಾಪಾಡು! ಕಾಪಾಡು! (ಮೈಮರೆತು ಪುನ: ಎಚ್ಚತ್ತು)

|| ರಾಗ-ಪೀಲು-ರೂಪಕ ||

ಏನು ಮಾಡಲಯ್ಯೋ ವಿಧಿಯೆ । ಹೀನಳಾದೆನೇ ‖ ಪಲ್ಲ ‖ ದೀನಳಾದ ಮಾತೆಗೆ । ನಾನೇನಪೇಳಲಿ ‖ ೧ ‖ ಕ್ಷಿತಿಯ ಸುದತಿಮಣಿಯರೆಲ್ಲ । ಪಿತ ವಿಘಾತಿನಿ । ಪತಿತೆಯೆಂದು ಜರೆಯದಿಹರೆ । ಮಿತಿಯ ಮಿಾರ್ವರೆ ‖ ೨ ‖ ಅನುಜಗೊರೆಯೆ ಶೋಕಗೊಂಡು । ತನುವನುಳಿಯನೆ । ಘನತರವಹ ತಾಪ ಕೀಗಲನುವುತೋರದೆ ‖ ೩ ‖ ಅಂಬುಜಾಕ್ಷಿ ಸಲಹೆ ಸಿರಿಯೆ ಸುಂಭಸೂದಿನಿ । ಸಂಬಿದೆನಾ ನಿನ್ನ ಪದವ । ಕಂಬುಕಂಧರಿ ‖ ೪ ‖

(ಎಂದು ಅಳುತ್ತಿರುವಳು)

**ವಿಶಾಖೆ:**—(ಓಡುತ್ತ ಬಂದು) ಆಯ್ಯೋ ಪ್ರಾಣಕಾಂತನೆ! ಆಯ್ಯೋ! ನನ್ನ ಮಾಂಗಲ್ಯವೆ! (ಕೈಕಾಲು ಮುಟ್ಟಿ)

‖ ರಾಗ-ಮುಖಾರಿ-ಅಷ್ಟ. ‖

ಎನ್ನ ಸ್ವಾಮಿ । ಘನ್ನಪ್ರೇಮಿ । ಸನ್ನುತಾಂಗ ಇನ್ನೇಂ ಭಂಗ ‖ ೧ ‖ ಇಷ್ಟಪ್ರಿಯೆಯ । ಬಿಟ್ಟು ಪೋಪೆಯ । ಕೊಟ್ಟು ಅಭಯ । ದೃಷ್ಟಿಸೈ ದಯ ‖ ೨ ‖ ಕಾಂತನಗಲಿ । ಚಿಂತಿಸುತಲಿ । ಎಂತು ಬಾಳಲಿ । ಸಂತಸದಲಿ ‖ ೩ ‖ ಜಾತೆಯಾಣ್ಮಗೆ । ಘಾತವೆಸಗೆ । ಜಾತನೆಡೆಗೆ । ತಾತನಡಗೆ ‖ ೪ ‖ ನೀತಿಮಿಾರಲು । ಸೋತ ಬಾಳು । ರೀತಿಗೆಟ್ಟುದೆ । ಸಾತಿಶಯದೆ ‖ ೫ ‖

ಆಹಾ! ವಿಧಿಯೆ! ಇಂದಿಗೆ ಅಯ್ದು ಬಾರಿ ಪುಣ್ಯಮೂರ್ತಿಯನ್ನು ಕೊಲ್ಲಲು ಯತ್ನಿಸಿ ವಂಶದೊಡನೆ ಸ್ವಘಾತವಾಯಿತೆ? ಹಾ! (ಎಂದು ಮೂರ್ಛೆ ಹೊಂದುವಳು.)

‖ ಇತಿ ತೃತೀಯಾಂಕಃ ‖



## ॥ ಅಥ ಚತುರ್ಥಾಂಕಃ ॥



[ಆಸ್ಥಾನ. ರಾಜನು ಪೀಠಗತನಾಗಿರುವನು.]

ಚಾರ:— ದೇವರವರ ಪಾದಕ್ಕೆ!

ರಾಜ:— ಚಾರನೇ! ಪಟ್ಟಣದ ವರ್ತಮಾನವೇನು?

**ಚಾರ:**— ಮಹಾಸ್ವಾಮಿಾ! ಈಗ ತಾನೆ ಜಗದಾಶ್ಚರ್ಯಕರವಾದ ಸೊ
ಜಿಗವನ್ನು ಕಂಡು ತಿಳಿಸಲು ಬಂದೆನು. ಅವಧರಿಸುವುದು.

॥ ರಾಗ-ಕಮಾಚ್‌ಜಿಲಾ-ಆದಿತಾಳ ॥

ಆಲಿಸು ಮಹಾರಾಜ । ಪಾಲಿತಾಖಿಲಪ್ರಜ । ಶೀಲಸದ್ಗುಣವ್ರಜ
ಪೇಳುವೆ ನಾಂ ನಿಜ ॥ ೧ ॥ ಪಲ್ಲವಾಧರೆ ಪ್ರಿಯ । ವಲ್ಲಭಾಜ್ಞೆಗೆ ದಯ
ವಿಲ್ಲದೆ ತನುಜೆಯ । ನಲ್ಲನ ಕೊಂದ ಮಾಯ ॥ ೨ ॥ ಇಂದಿಗಯಿದುವಾರ
ಚಂದದೆಸಗಿ ಘೋರ । ಬಂಧನದೊಳು ನೀರ । ತಂದನು ಯಮಪುರ ॥ ೩

ಅಲ್ಲದೆ ಅದೃಷ್ಟಶಾಲಿಯಾದ ಸುತೆಯೆರೆಯನು ನಮ್ಮ ಗುಣಪಾಲಶೆಟ್ಟ
ಮಗನಂತೆ. ಶ್ರೀದತ್ತನು ದ್ವೇಷಿಸಲು, ಅವನ ತಂದೆ ಮಡಗಿರುವ ಅಪಾರ
ವ್ಯಾಪಹಾರದ ಅಭಿಲಾಷೆಯೇ.

ರಾಜ:— ಸಚಿವನೆ! ಏನಾಶ್ಚರ್ಯವು!

॥ ರಾಗ-ಕಮಾಚ್ ಆದಿತಾಳ. ॥

ನೋಡೆಲೊ ಮಂತ್ರವಿಶಾರದನೆ । ಕಡುಪಾಪಿಯ ಕಾರ್ಯವ ॥ ಪಲ್ಲ
ಮೂಢಮತಿಗೆ ತಾಂ । ಮಾಡದೆ ಧರ್ಮವ । ಮಾಡಿದ ಕೃತಕವು । ಕಾ
ಪೋಪುದೆ ॥ ಅನು ॥ ಇಳೆಯೊಳು ತನ್ನಯ । ಅಳಿಯನ ಕೊಲಿಸು
ಖೂಳ ದುರುಳ । ಕಲಿಯಲ್ಲದೆ ನಿಜ । ಮಾನುಷನೀಪರಿಯಲ್ಲ ॥ ಬಲ್ಲಿ

ದೇಶದೊ । ಳಿಲ್ಲದ ನಡತೆಯ । ಖುಲ್ಲನೆಸಗಿದನು । ಗಲ್ಲನೆ ನಡೆದನು ‖ ೧ ‖

ವಂಚಕರಿಗೆ ಜಿನಧರ್ಮವು ಆಶ್ರಯವನ್ನು ಕೊಡಲಾರದೆಂಬುದು ನಿದರ್ಶಿತವಾಯಿತು. ಆಗಲಿ! ಆ ಬಾಲಕನು ಅಯ್ದು ಬಾರಿಯೂ ಮರಣಬಾಧೆಯನ್ನು ತಪ್ಪಿಸಿಕೊಂಡನೆಂದರೆ ಅಸಾಧಾರಣಪುರುಷನೇ ಸರಿ. ಆತನನ್ನು ನೋಡಲಪೇಕ್ಷೆಯುಂಟು. ಜತನದಿಂದ ಕರೆಯಿಸು.

ಮಂತ್ರಿ:—ಚಾರನೇ! ಶ್ರೀದತ್ತನ ಅಳಿಯನನ್ನು ಗೌರವದೊಡನೆ ಕರೆದು ತರುವುದು.

ಚಾರ:—ಆಜ್ಞೆಯಂತೆ. (ಎಂದು ಕರೆದುತರುವನು.)

ಧನಕೀರ್ತಿ:—ಪೊಡವೀಶನೆ! ವಂದಿಸುವೆನು ಕರೆಯಿಸಿದ ಕಾರ್ಯಗೌರವವೇನು?

ರಾಜ:—ಸೌಭಾಗ್ಯಶಾಲಿಯೆ! ವಿಷ್ಟರಾಧಿಷ್ಠಿತನಾಗಬಹುದು. (ಮಂತ್ರಿಯಂ ಕಂಡು)

**ಕಂದ** ॥ ಸುಕವಾರನಿವಂ ಮತ್ಸುತೆ ।
ಸುಕುಮಾರಿಗೆ ಯೋಗ್ಯವಲ್ಲಭಂ ತಾನಪ್ಪಂ ‖
ಸುಕರಮೆನಿಕ್ಕುಂ ವೈವಾ ।
ಹಿಕದಿಂದಿರ್ವರನುವೊಂದುಗೂಡಿಸಲಿಷ್ಟಂ ‖

ಈ ವಿಷಯದಲ್ಲಿ ನಿನ್ನ ಅಭಿಮತವೇನು?

ಮಂತ್ರಿ:—ಒಡೆಯನೆ! ನನ್ನ ಮನೋಗತವು ತಮ್ಮಿಂದಲೇ ಪುಷ್ಟಿಗೊಳಿಸಲ್ಪಟ್ಟಿತು. ಹೇಳತಕ್ಕದ್ದೇನಿದೆ? ಆದರೆ ಕುಮಾರನಲ್ಲಿಯೂ ಈ ಉದ್ದೇಶವನ್ನು ವ್ಯಕ್ತಗೊಳಿಸಬೇಕೆಂದು ವಾಂಛಿತವು.

ರಾಜ:—ಅಹುದು ಕುಮಾರನೆ! ಕೇಳು.

ಅಚುಂಬಿತವಾದ ನಿನ್ನ ಕೀರ್ತಿಯಿಂದ ಸಂತೋಷಪೂರಿತನಾದೆನು. ನನ್ನ ತನುಜೆಯೊಡನೆ ರಾಜ್ಯಾರ್ಧವನ್ನೂ ಶುಲ್ಕದ್ರವ್ಯವನ್ನಾಗಿ ಕೊಡುವೆನು. ಮತವೆಂತಿರುವುದು?

ಧನಕೀರ್ತಿ:—ಪೂಜ್ಯರಾಜ್ಞೆ ಶಿರೋಧಾರ್ಯವು.

ರಾಜ:—ಅಮಾತ್ಯನೆ! ದೈವಜ್ಞರಿಂದ ಮುಹೂರ್ತವನ್ನಿಡಿಸಿ ಧನಕೀರ್ತಿಯ ಮಾತಾಪಿತೃಗಳನ್ನು ಎಲ್ಲಿದ್ದರೂ ಹುಡುಕಿ ಗೌರವದೊಡನೆ ಬರಮಾ ಸಮಯದಲ್ಲಿ ಸೂಚಿಸು. (ಎಂದು ಧನಕೀರ್ತಿಯೊಡನೆ ತೆರಳುವನು.)

ಮಂತ್ರಿ:—ಯಾರಲ್ಲಿ? (ಅಷ್ಟರಲ್ಲಿ ಇಬ್ಬರು ಚಾರಕರು ಬರುವರು.) ನೀನ ಬೇಗನೆ ಹೋಗಿ ಕುಮಾರನನ್ನು ಕರೆದುಕೊಂಡು ಬಾ. (ಇನ್ನೊಬ್ಬನಲ್ಲಿ) ರಾ ಪುರೋಹಿತನಿಗೆ ನಮ್ಮಾಜ್ಞೆಯನ್ನು ತಿಳಿಸು.

ಕುಮಾರ:—(ಪ್ರವೇಶಿಸಿ) ಆರ್ಯನೆ! ಮಣಿವೆನು. ಪ್ರಸ್ತುತಕಾರ್ಯವೇನು

ಮಂತ್ರಿ:—ಕೇಳು.

|| ರಾಗ-ಕಾಂಬೋದಿ-ಅಷ್ಟತಾಳ. ||

ತರಳ ಪೋಗು | ಭರದೊಳೀಗ | ಳಿರದೆ ಸೌಭಗ || ಸುರಪದಸಿರಿಯನ ಜರೆಯುವ | ವರಕೌಶಾಂಬಿ | ಪುರವಸಾರಿ | ಭರದೊಳಲ್ಲಿ | ಮರೆಯದೆ ಚ ಸುತಲೆಲ್ಲೆಡೆ || ೧ || ಕಾಣುತೆ ಗುಣ | ಪಾಲನನ್ನು | ಕ್ಷೋಣಿಪತಿಯ ಆಣೆಯ ಗಡಣದೆ ಸೂಚಿಸಿ || ಮಾಣದಿಂದೆ | ಜಾಣತನದೆ | ಶ್ರೀನಿಧಿಯನು ಕ್ಷಣದಲಿ ನೀನೀಗಳೆ ಕರೆತರುವುದು || ೨ ||

ಅವನು ಸಂದೇಹಿಸಿದಲ್ಲಿ

ಕಾಮವಿಜಯ | ನೇಮಿಯ ದಯ | ವಿಾ ಮಹಿಯೊಳೆ | ಕ್ಷೇಮ ಫಲಿಪುದುಯೆನುತಲಿ || ಕೋಮಲಾಂಗನೆ | ನೇಮದಿಂದಲಿ | ಪ್ರೇಮದೊ ನಿ | ಸ್ನೇಮನ ನೆರೆ ಬರವೇಳ್ವುದು || ೩ ||

ಕುಮಾರ:—ಆಜ್ಞೆಯಂತೆ. (ಎಂದು ಹೋಗುವನು.)

ಪುರೋಹಿತ:—(ಪ್ರವೇಶಿಸಿ) ಮಂತ್ರಿಶ್ರೇಷ್ಠನೆ ವಂದಿಸುವೆನು. ಬರಮ ಡಿಸಿದ ಉದ್ದೇಶವೇನು?

ಮಂತ್ರಿ: —

ಕಂದ ||  ಅರಸಂ ಸ್ತ್ರೀಯಕುಮಾರಿಗೆ |
ಪರಿಣಯಮೆಸಗಲ್ಕೆ ಯೋಚಿಪಂ ವರನಿಪ್ಪರ್ಗಂ ||
ಸ್ಮರಸನ್ನಿಭರೂಪಂ ಸುರು |
ಚಿರಚರಿತಂ ಸುಗುಣಪಾಲತನಯುನಮೇಯುಂ ||

ಪೂಜ್ಯರೆ! ನಿರ್ದುಷ್ಟವಾದ ಲಗ್ನವನ್ನು ಪರಿಶೀಲಿಸಿ ಹೇಳಬೇಕಾಗಿರುವುದು.

ಪುರೋಹಿತ: — ಅದಕ್ಕೇನು? ಆಗಬಹುದು. ಮೇಷ, ವೃಷಭ, ಮಿಥುನ, ಕುಂಭದೊಳಗೆ ಮೀನ! (ಗುಣಿಸುತ್ತಾ) ಈ ದಿನ ರಾತ್ರಿ ಸುಮಾರು ಗಳಿಗೆ ಹದಿನೈದೂವರೆಗೆ, — ಅಲ್ಲ; — ಹದಿನಾರೂಮುಕ್ಕಾಲಿಗೆ ಒಂದು ಲಗ್ನವು ಶ್ಲಾಘನೀಯವಾದದ್ದು. ಸಾಮಾನ್ಯರಿಗೆ ಎಂದೂ ಅಲಭ್ಯವೇ. ಮುಂದೆ ಮಾಸಪರ್ಯಂತವಾಗಿ ಮೌಢ್ಯವು. ಅಲ್ಲದೆ, ಇನ್ನೊಂದು ಲಗ್ನದ ಗುಣವನ್ನು ಏನೆಂದು ಹೇಳಲಿ?

ಮಂತ್ರಿ: — ಅದನ್ನೇ ತಿಳಿಹಬಹುದು.

ಪುರೋಹಿತ: — ಅವಧರಿಸಬೇಕು.

|| ರಾಗ_ಕಮಾಚ್_ರೂಪಕ. ||

ಏನನೆಂಬೆನು | ಜ್ಞಾನವಾರ್ಧಿಯೆ | ಮಾನಿತವರಸುಮುಹೂರ್ತವ || ಪಲ್ಲ || ಇಂದು ಸೂರ್ಯನಸ್ತನಾಗೆ | ಬಂದು ತೋರೆ ಬಾಣಯುಗವು | ಕುಂದದಿಮ್ಮಡಿಯಾಗೆ ಗಳಿಗೆ | ಮುಂದೆಸೆವುದೆ ಮಿಥುನಲಗ್ನವು ||೧|| ರಾಜಯೋಗದ ಸೂಚನೆಯದು | ತೇಜವಂತರಾಗಿ ಸೊಗದೆ | ರಾಜ್ಯ ಭೋಗವಡೆದು ಸರ್ವ | ಪೂಜ್ಯರಾಗುವರಯ್ಯ ನಿರತ || ೨ || ಪುಣ್ಯವಿದ್ದೊರ್ಡಲ್ಲದೀಯ | ಗಣ್ಯಲಾಭವು ದೊರೆಯಲಪ್ಪುದೆ | ಮಾನ್ಯರ ನುಡಿಯೆಂದಿಗುಂ ಪ್ರಾಮಾಣ್ಯವಲ್ಲವೆ ಮಂತ್ರಿಶೇಖರ || ೩ ||

**ಮಂತ್ರಿ**:— ಆಗಲಿ! ತಾವು ದಯೆಮಾಡಿಸಬಹುದು. ಸಮಯದಲ್ಲಿ ಬ
ಮಾಡುವೆನು. (ತನ್ನಷ್ಟಕ್ಕೆ) ಮುಹೂರ್ತವು ಸಮೀಪಗತವಾದ್ದರಿಂದ ರಾ
ನಿಗೆ ತಿಳಿಸುವೆನು. (ಎಂದು ನಡೆಯುವನು.)



(ಗುಣಪಾಲನೇ ಮೊದಲಾಗಿ ರಾಜನ ಪ್ರವೇಶ.)

[ವಿವಾಹ ಮಂಡಪ.]

ರಾಜ:—ಮಗಳೆ! ಪುರೋವರ್ತಿಯಾದ ಈ ಕುಮಾರನನ್ನು ವರಿಸಿ ಸ
ಖಿಯಾಗು.

**ವಿಶ್ವವತಿ**:—(ಸಾನಂದದಿಂದ ಪುಷ್ಪಮಾಲೆಯನ್ನು ಧರಿಸಿ,)

|| ರಾಗ-ಕಾನಡ_ರೂಪಕ ||

ವರಿಸುವೆನೀಗಳೆ । ವರನ । ಪ್ರಿಯನ ॥ ಪಲ್ಲ ॥ ಕರುಣಾ । ಭರಣ
ಶರಣ । ಸ್ಮರನ ॥ ಅನು ॥ ಮಾರವೈರಿಯ । ಸೇರಿ ನಿನ್ನೊಳು । ಭೂರಿಭಕ್ತಿ
ಯ ಮೀರಿಸಿ ॥ ಧರಣಿ । ಧರನ । ತರುಣೀ । ಗೆರಗೀ ॥ ೧ ॥ ಸುಂದರಾ
ಗನ । ಕಂಧರದಿ ಸುಮ । ಕುಂದಹಾರವನಿಕ್ಕುವೆಂ ॥ ಇಂದ । ಮಂದಾ
ನಂದ । ದಿಂದ ॥ ೨ ॥ ಸಾರಸಾಕ್ಷನ । ಸೇರುವೆನು ಸಂ । ಸಾರ ಸುಖವನ
ಪಡೆವೆನು ॥ ಪರಮ । ಹರುಷ । ಭರದಿ । ಮೆರೆದು ॥ ೩ ॥

ಧನಕೀರ್ತಿ:—

|| ರಾಗ-ಜುಂಜೂಟಿ-ರೂಪಕ ||

ಬಾರೆ ಸುಂದರಿ । ಮಾರಮಂಜರಿ । ನಾರೀಮನೋಹರಿ ॥ ಪಲ್ಲ ॥ ಸ
ರಲಹರಿ । ತೋರುವೆ ಸಿರಿ । ಭೂರಿಸುಖಕರಿ ॥ ಅನು ॥ ನಲ್ಲೆಯಾದರೆ
ನಿಲ್ಲುವೆ ಖರೆ । ಪಲ್ಲವಾಧರೆ ॥ ನಿಲ್ಲೆ ಸುಮಧುರೆ । ಮೆಲ್ಲುವೆ ಪರ । ಮೋಲ್ಲಾ
ಬೀರೆ ॥ ೧ ॥ ಅಂಬುಜಕರೆ । ನಂಬಿ ಬಂದರೆ । ಬಿಂಬಸಮಾಧರೆ ॥ ಚುಂಬಿ

ಮರಿ । ದುಂಬಿಯ ಸರಿ । ಕಂಬುಕಂಧರಿ ॥ ೨ ॥ ಪನ್ನಗವೇಣಿ । ಮನ್ನಿಸೆ ರಾಣಿ । ಮನ್ಮನೋಮಣಿ । ಸನ್ನುತಾಂಗಿನಿ । ಚೆನ್ನೆಸದ್ಗುಣಿ । ರನ್ನೆಕಲ್ಯಾಣಿ ॥ ೩ ॥

(ರಾಜನನ್ನು ನಮಸ್ಕರಿಸಿ) ಪೂಜ್ಯರೆ! ಆಜ್ಞೆಯೇನು?

ರಾಜ: — ಪುಣ್ಯಮೂರ್ತಿಯೇ! ಪುತ್ರವಂತನಾಗಿ ಜಿನಧರ್ಮವನ್ನು ಕಾಪಾಡು. (ಎಂದು ಗುಣಪಾಲನನ್ನು ಕುರಿತು) ನನ್ನಿಂದ ಬಹುಪರಿಶ್ರಮವಾಯಿತು. ದ್ರೋಹಿಯಾದೆನು. ಕ್ಷಮಿಸಬೇಕು.

॥ ರಾಗ-ಕಾಂಬೋದಿ-ತಾಳ-ಆದಿ. ॥

ಕರುಣಿಪುದೆನ್ನನಿಂದೆ । ಪರಮಹರುಷದಿಂದೆ ॥ ಪ ॥ ಉರುದುಃಖಮಿರದಿರೆ । ಪರಿತೋಷವಾಂತಿರೆ ॥ ೧ ॥ ಪೂರ್ವದ ಮಾನಸ್ಥಾನ । ವುರ್ವಿಯರ್ಧವನೆನ । ದಿರ್ವರು ಸಲಹಲಿ । ಸರ್ವಸೌಖ್ಯವನಾಳಿ ॥ ೨ ॥ ರಾಜರಾಜೇಶ್ವರ । ಪೂಜ್ಯನೇವಿಶ್ವರ । ನೋಜೆಯಿಂದೆಲ್ಲರ । ಸಾಜದೆಸಲಹುವ ॥ ೩ ॥

ಸರ್ವವನ್ನೂ ಪರಿಗ್ರಹಿಸಿ ಪೂರ್ವದಂತೆ ಪ್ರೇಮವಿರಿಸಬೇಕೆಂಬುದೇ ಮುಖ್ಯಾಭಿಪ್ರಾಯವು.

ಗುಣಪಾಲ: — ॥ ರಾಗ-ಕಮಾಚ್-ಏಕ. ॥

ಚಿತ್ರವನಾಂತೆನೀಗ । ಕ್ಷತ್ರಿಯಮಣಿ ॥ ಪಲ್ಲ ॥ ಗೋತ್ರಾರಿ ಗುರುನಿಭ । ಶಾಸ್ತ್ರಕೋವಿದನಿರೆ ॥ ಅನು ॥ ಪೂರ್ವಜನ್ಮದ ಕೃತಿ । ಮೀರ್ವೊಡೆಂದಿಗೆಗತಿ । ಸಾರ್ವೊಡೆ ಸಾಧ್ಯವೆ । ಸಾರ್ವಭೌಮನಾದೊಡೆ ॥ ೧ ॥ ತನ್ನಯ ಕೃತಕವೇ । ನನ್ಯರ ಹತಿಪುದೆ । ಮಾನ್ಯನೆ ಲೋಕದೆ । ಬನ್ನಃಶಮಾತಿದೆ ॥ ೨ ॥ ಕಾಮವಿಜಯ ಸಿರಿ । ನೇಮಿಯ ಕರುಣವು । ನೇಮದೊಳಿರುತಿರೆ । ಕ್ಷೇಮವಲ್ಲದಿರ್ಪುದೆ ॥ ೩ ॥

ಮಹಾರಾಜನೆ! ನೀನು ಕಾರಣನೆ? ಭವಿತವ್ಯತೆಯನ್ನು ಯಾರೂ ಮೀರಲಾರರು. ಆಜ್ಞಾಭಂಗಗೆಯ್ದ ನನ್ನಅಪರಾಧವನ್ನೇ ಕ್ಷಮಿಸಬೇಕು.

ರಾಜ: — ಸಚಿವನೇ! ಪಟ್ಟಬಂಧಕ್ಕೆ ಸಲಕರಣೆಗಳು ಸಿದ್ಧವಾಗಲಿ. ಸಿ
ವಾಗಲಿ.

ಮಂತ್ರಿ: — ಮುಂಚಿತವಾಗಿಯೇ ಸಜ್ಜೀಕರಿಸಿರುವೆನು.

ರಾಜ:—(ಧನಪಾಲನನ್ನು ಪೀಠದಲ್ಲಿ ಕುಳ್ಳಿರಿಸಿದ ಬಳಿಕ ಎಲ್ಲರೂ ಹಾಡುವರು.)

|| ರಾಗ_ಹಿಂದುಸ್ಥಾನಿ-ಭೈರವಿ_ಏಕ. ||

ಸುರವರ | ಗಿರಿಧರ | ನರಪತಿ ಸನ್ನುತ | ಮೆರೆಯೊ ಸದಾ ಕೃ
ಯಂ || ಪಲ್ಲ || ಕರುಣಾ | ಭರಣ | ಶರಣ || ಹರುಷ | ಭರವ | ನಿರಿಸಿ | ಧ
ಯ | ಪೊರೆಯೊ | ಭರದೆ | ಧರಣಿಪ || ಸರಸಿಜಾಕ್ಷ | ಅರಿವಿಪಕ್ಷ | ಹರಣ
ಕ್ಷ | ದುರಿತರಕ್ಷ || ೧ || ಅರಲ | ಶರನ | ನರಿದು || ಶಿರವ | ತರಿದ | ಸುರರ
ವರನ | ಚರಣ | ವಿರದೆ | ಸ್ಮರಿಸುತ || ಮೆರೆಯೆ ಧರ್ಮ | ವರಸುಮಾರ್ಗ
ದಿರವ ತೋರ್ದ | ಬೆರೆಯಮರ್ದ || ೨ || ಅರಿರಾ | ಜರಸೀಂ | ತರಿದು
ಪುರವ | ನಿರದೆ | ಮುರಿದು | ರತನಿ | ಮೆರೆಯೊ | ಶೂರನೇ || ಕರುಣದಿಂದ
ಪೊರೆಯಮಂದ | ಸಿರಿಯ ತಂದ | ತಿರೆಯದಂದ || ೩ ||

|| ಶ್ರೀ. ||

[ಇತಿ ಚತುರ್ಥಾಂಕಂ.]



## ॥ ಅಥ ಪಂಚಮಾಂಕಃ ॥

[ರಾಜನ ಆಸ್ಥಾನ.]

(ರಾಜನಾದ ಧನಕೀರ್ತಿ ಮಂತ್ರಿಯೊಡನೆ ಪೀಠಸ್ಥನು.)

**ರಾಜ:** — ಮಂತ್ರಿಯೆ! ಶಾಶ್ವತಸುಖಾನುಭವಕ್ಕೆ ವೈರಾಗ್ಯವೇ ಮುಖ್ಯ ಕಾರಣವಲ್ಲವೆ? ಕೇಳು. —

**ಕಂದ** ॥ ತಿರೆಯಂ ಸದ್ಧರ್ಮದಿನಾಂ ।
ಪೊರೆದರ್ಥಮನಿರದೆ ಗಳಿಸಿ, ಸಂಸಾರದೊಳಂ ॥
ವರಸತಿಸುತಭೋಗದೆ ಸೊಗ ।
ಮಿರುತಿರ್ದೊಡಮಳ್ದಿನಿಲ್ಲ ಶಾಶ್ವತಸುಖದೊಳ್ ॥

**ಮಂತ್ರಿ:** — ಮಹಾರಾಜನೆ! ಈ ವಯಸ್ಸಿಗೆ ಅನುರೂಪವಾದ ಯೋಚನೆಯಿದಲ್ಲವೆಂದು ಹೇಳಿದೆನು.

**ಚಾರ** — (ಪ್ರವೇಶಿಸಿ) ಜೀಯಾ! ವಂದಿಸುವೆನು. ಅವಧರಿಸಬೇಕು.

॥ ರಾಗ-ಜುಂಜೂಟಿ-ಅಷ್ಟತಾಳ. ॥

ಭೂಮಿಪಾಲ । ಲಾಲಿಪುದೀಗವೋದದಿ ॥ ಪಲ್ಲ ॥ ಕಮನೀಯವೆನಿಸಿದಾ । ಅಮರಭೂರುಹದಂತೆ । ಕಾಮಿತಾರ್ಥಕೆ ನೆಲೆಯಾಗಿಹ ॥ ೧ ॥ ಪುರಬಹಿರಂಗದಿ । ಪುರುಜಿನಗೇಹದಿ । ಮೆರೆವನದೊರ್ವನು ಕಿತ್ತಡಿ ॥ ೨ ॥ ವರಯಶೋಧರಮುನಿ । ಕರುಣವಾರಿಧಿಖನಿ । ಭರದಿಬಂದಿಹನು ಕೃಪಾವನಿ ॥ ೩ ॥

ಉತ್ತರದಿಗಂಗನಾಮಂಡನವಾದ ಸಹಸ್ರಕೂಟಚೈತ್ಯಾಲಯಕ್ಕೆ ರತ್ನತ್ರಯಾತ್ಮಕರಾದ ಮುನಿಪುಂಗವರು ಬಿಜಯಂಗೈದಿರುವರು.

**ರಾಜ:** — (ಏಳು ಹಜ್ಜೆಯಂ ನಡೆದು ನಮಸ್ಕರಿಸಿ **ಉಚಿತವನ್ನು ಕೊಟ್ಟು** ಮಂತ್ರಿಯನ್ನು ಕಂಡು) ಆನಂದಭೇರಿಯು ಹೊಡೆಯಿಸಲ್ಪಡಲಿ! ಮುನಿದರ್ಶನಕ್ಕಾಗಿ ಎಲ್ಲರೂ ಹೊರಡುವೆವು.

[ಜಿನಾಗಾರ. ಮುನಿಗಳು ಕುಳಿತಿರುವರು.]

ಮುನಿ: — || ರಾಗ-ಅಸಾವೇರಿ-ಆದಿ. ||

ಜಯ ಜಯ ಜಯ ಜಯ ಜಯ ನೇಮಿಶನೆ | ಕಾಯಜದೂರ ನವೆ
|| ಪಲ್ಲ || ನಾಮಸಾಸಿರನೆ | ಸೋಮನೆ ಶಾಂತನೆ | ಪ್ರೇಮಪಾತ್ರನೆ | ಶ್ಯಾ
ಲರೂಪನೆ || ೧ || ಕರುಣಾಸಾಗರ | ದುರಿತವಿದೂರ | ಪರಿಪರಿಭವಭಯ
ಹರ ಸುಗುಣೋದಯ || ೨ || ಧರ್ಮವಿಕಾಸಕ | ಮರ್ಮಭೇದಕ | ಕವ
ವಿನಾಶಕ | ನಿರ್ಮಳಿನೋದಕ || ೩ ||

(ಎಂದು ನಮಸ್ಕರಿಸುವನು.)

ರಾಜ: — (ಪ್ರವೇಶಿಸಿ ಮಂದಿರವನ್ನು ನೋಡಿ)

ಶ್ಲೋಕ || ದೃಷ್ಟಂ ಧಾಮ ರಸಾಯನಸ್ಯ ಮಹತಾಂ ದೃಷ್ಟಂ ನಿಧೀನಾಂ ಪದಂ
ದೃಷ್ಟಂ ಸಿದ್ಧರಸಸ್ಯ ಶುದ್ಧಸದನಂ ದೃಷ್ಟಂ ಚ ಚಿಂತಾಮಣಿ: ||
ಕಿಂ ದೃಷ್ಟೈರಥವಾऽನುಷಂಗಿಕಫಲೈರೇಭಿರ್ಮಯಾದ್ಯ ಧ್ರುವಂ |
ದೃಷ್ಟಂ ಮುಕ್ತಿವಿವಾಹಮಂಗಲಗೃಹಂ ದೃಷ್ಟೇ ಜಿನಶ್ರೀಗೃಹೇ ||

(ಜಿನೇಶ್ವರನನ್ನು ಕಂಡು)

ಶ್ಲೋಕ || ತುಭ್ಯಂ ನಮಸ್ತ್ರಿಭುವನಾರ್ತಿಹರಾಯ ನಾಥ |
ತುಭ್ಯಂ ನಮ: ಕ್ಷಿತಿತಲಾಮಲಭೂಷಣಾಯ ||
ತುಭ್ಯಂ ನಮಸ್ತ್ರಿಜಗತ: ಪರಮೇಶ್ವರಾಯ |
ತುಭ್ಯಂ ನಮೋ ಜಿನಭವೋದಧಿಶೋಷಣಾಯ ||

(ಎಂದು ನಮಸ್ಕರಿಸುವನು.)

ಮಂತ್ರಿ: —

ಶ್ಲೋಕ || ಯಃ ಕೀರ್ತಿರ್ಧವಲೀಚಕಾರ ಸಹಸಾ ಬ್ರಹ್ಮಾಂಡಭಾಂಡೋ
ದರಂ
ದಾಶಾರ್ಹೋऽಪಿ ತದಂತರಾನ್ನಿಪತಿತಃ ಸದ್ಯೋ ನ ಸಂಲಕ್ಷಿತಃ

ತೇನಾದ್ಯಾಪಿ ನಿರೀಶ್ವರಂ ಜಗದಿದಂ ಜಲ್ಪಂತಿ ಸಾಂಖ್ಯಾದಯ|
ಸ್ಸ ಶ್ರೀನೇಮಿಜಿನೇಶ್ವರೋ ಭವಭೃತಾಂ ದೇಯಾದಮಂದಾಂ
ಮುದಂ || ೧ ||

ಸ್ವಾಮಿಯೆ! ಕೃತಾರ್ಥನಾದೆನು. (ಎಂದು ನಮಸ್ಕರಿಸುವನು.)

ರಾಜ:— ಆಹಾ! ಜನ್ಮವೇ ಸಾರ್ಥಕವಾಯಿತು.

|| ರಾಗ-ಮೋಹನ-ಆದಿ. ||

ಸ್ವಾಮಿ ಈಶನೆ | ಕಾಮನಾಶನೆ | ಪ್ರೇಮಭಾಸನೆ | ಭೂಮಿತೋಷನೆ || || ಪಲ್ಲ || ಧರ್ಮಘೋಷನೆ | ಘರ್ಮಶೋಷನೆ | ಮರ್ಮಕಾಶನೆ | ಶರ್ಮಕೋಶನೆ || ಅನು || ಮುನಿಶೇಖರ | ಸುನಯಾಂಬರ | ಗುಣಬಂಧುರ | ತನುಚಂದಿರ || ಮನುಜೇಶ್ವರ | ಘನಸುಂದರ | ವನಜಾಕರ | ವನಭಾಸ್ಕರ || ೧ || ಸುವಿನಾಯಕ | ಸವಿತಾಭಕ | ಜವಜಾಲಕ | ನಿವಹಾಂತಕ || ಸ್ತವಪೋತಕ | ಭವತಾರಕ | ಶಿವದಾಯಕ | ತವಸೇವಕ || ೨ ||

ಅಕಾರಣಬಂಧುವೆ! ವಂದಿಸುವೆನು.

**ಶ್ಲೋಕ** || ಬುದ್ಧಸ್ತ್ವಮೇವ ವಿಬುಧಾರ್ಚಿತಬುದ್ಧಿಬೋಧಾ |
ತ್ವ್ವಂ ಶಂಕರೋಸಿ ಭುವನತ್ರಯಶಂಕರತ್ವಾತ್ ||
ಧಾತಾಸಿ ಧೀರ ಶಿವಮಾರ್ಗವಿಧೇರ್ವಿಧಾನಾತ್ |
ವ್ಯಕ್ತಂ ತ್ವಮೇವ ಭಗವನ್ ಪುರುಷೋತ್ತಮೋಸಿ ||೧ ||

|| ರಾಗ-ಆನಂದಭೈರವಿ-ತಾಳ-ಅಷ್ಟ. ||

ಹರಿ | ವಂಶಾಂಬರದ್ಯುಮಣೇ || ಶರಪಂಚರುದ್ಧಗುಣೇ | ವರಭವ್ಯಜನಕರುಣೇ | ಪರಿಪಾಹಿ ಮನ್ಮಣೇ || ಪಲ್ಲ || ಸಾ | ರಸಕುಸುಮದಳನಯನ | ಪುರುಹೂತನತಚರಣ | ಮುರವೈರಿ ಮದಮಥನ || ಶರಧಿವಿಜಯಾನುಜಮನೋಹರ | ಹರಾರ್ಚಿತ ವರ | ಗಿರೀಶ್ವರ ಪರ || ೧ || ಪಾ | ವನಜಿನಪ ಪರಚರಿತ | ಶಿವದೇವಿಸುತ ವಿರತ | ನವಮದನರೂಪಯುತ | ಕುವಲ

ಯಾಭಶರೀರ ಸನ್ನುತ | ಭವಾಂತಕ ಘನ | ಶಿವಾಭವಜಿನ || ೨ || ರಾ
ಜೀವಜಾರಮಣ | ಅಜರಾದ್ಯಸುಖಧರಣ | ತ್ರಿಜಗೈಕಶುಭಕರಣ || ವಿಜಿ
ಕರ್ಮಾಷ್ಟಕ ವಿಕಾರಣ | ಸುಜನಸನ್ನುತ | ಭುಜಬಲಾರ್ಚಿತ || ೩ ||

ಇದೇ ಸುದಿನವು! ನೇತ್ರವೇ ಪಾವನವಾಯಿತು. ಗುರುನಾಥ! ತ್ರಿಜ
ದಾನಂದದಾಯಕವಾದ ನಿಮ್ಮ ಧರ್ಮೈಕವಚನಾಮೃತಾಂಬುದಮಣಿಯ
ನ್ನು ಭವ್ಯಚಾತಕವೃಂದವು ಎಡೆಬಿಡದೆ ಹಾರೈಸುತ್ತಿರುವುದು. ಸ್ವಾಮಿಯೆ
ಪ್ರಾಣಿಸಮುದಾಯಕ್ಕೆ ಕಷ್ಟದಾಯಕವಾದ ಪಾಪಗಳ ಇರವನ್ನು ತಿಳಿಯ
ಲಾಶೆಯಲ್ಲದೆ, ಆತ್ಮಕಲ್ಯಾಣವನ್ನು ಸಾಧಿಸುವ ಉಪಾಯವನ್ನೂ ತಿಳಿಯ
ಪೇಕ್ಷೆಯು.

**ಮುನಿ:**—ಆ ವಿಷಯವಾಗಿ ನಮ್ಮ ಪೂಜ್ಯಪಾದರಾದ ಗುರುಗಳು ಹೇಳ
ವುದನ್ನು ಕೇಳುವನಾಗು.

ಶ್ಲೋಕ || ಬಲಭೋಗೋಪಭೋಗಾನಾಮುಭಯೋರ್ದಾನಲಾಭಯೋಃ |
ಅಂತರಾಯಸ್ತಥಾ ನಿದ್ರಾ ಭೀರಜ್ಞಾನಂ ಜುಗುಪ್ಸಿತಮ್ |
ಹಿಂಸಾ ರತ್ಯರತೀ ರಾಗದ್ವೇಷೌ ರತಿರತಿಸ್ಮರಃ |
ಶೋಕೋ ಮಿಥ್ಯಾತ್ವಮೇತೇಷ್ಟಾದಶದೋಷಾ ನಯಸ್ಯಸಃ ||

ಅವಿರತಿ, ಮಿಥ್ಯಾದರ್ಶನ, ಪ್ರಮಾದ, ಕಷಾಯ — ಇವುಗಳು ಬಂಧ
ಹೇತುಗಳು. ಎಲೈ ರಾಜನೆ! ಇವೆಲ್ಲ ಯಮರಾಜನ ಪ್ರಿಯಸೇವಕರು. ಇ
ವುಗಳೇ ಪಾಪಾತ್ಮನನ್ನು ನರಕಾದಿದುರ್ಗತಿಗಳಿಗೆ ಉಯ್ಯುವುವು. ಚಕ್ರವತಿ
ದೇವೇಂದ್ರ! ಆಬಾಲವೃದ್ಧರನ್ನೂ ಇವು ಬಿಡುವುದಿಲ್ಲ. ಇನ್ನು ಪಾಪಗಳಿಂ
ಮುಕ್ತನಾಗಿ ಸ್ವಾತ್ಮಸುಖವನ್ನು ಸಾಧಿಸುವ ಉಪಾಯವುಂಟು. ಕೇಳುವ
ನಾಗು.

**ಕಂದ** || ಅಪರಿಗ್ರಹಮಸ್ತೇಯಂ |
ಸುಪವಿತ್ರಬ್ರಹ್ಮಚರ್ಯಮಿಂದ್ರಿಯವಿಜಯಂ ||
ರಿಪುದಮನಂ ವೈರಾಗ್ಯಂ |
ಜಪದಾನಮಹಿಂಸೆ ಸತ್ಯಮಿವು ಸುನಯಂಗಳ್ ||

ಇವುಗಳನ್ನು ದೃಢಭಕ್ತಿಯಿಂದ ಪಾಲಿಸಲು ಪ್ರಾಣಿಗಳಿಗೆ ದುಃಖದಾಯಕವಾದ ನರಕತಿರ್ಯಂಚಾದಿಗಳನ್ನು ತಪ್ಪಿಸಿ ಪರಂಪರೆಯಿಂದ ಮೋಕ್ಷವನ್ನುಂಟುಮಾಡುವುವು. ಕೈವಲ್ಯಸುಖವಾದರೋ ಅನಂತದರ್ಶನ, ಅನಂತಜ್ಞಾನ, ಅನಂತವೀರ್ಯ ಅನಂತಸುಖಾಸ್ಪದವೆಂದು ತಿಳಿ.

**ರಾಜ:**— ಅಕಾರಣಬಂಧುವೆ! ಇಂದಿಗೆ ಅಗಾಧವಾದ ಸಂಸಾರಸಾಗರವನ್ನು ಸುಗಮವೆಂದು ತಿಳಿದೆನು. ಸ್ವಾಮಿಾ! ಈ ತಮ್ಮ ದಾಸನಲ್ಲಿ ಶ್ರೀದತ್ತನು ವೈರವನ್ನು ಬಳೆಯಿಸುವುದಕ್ಕೂ ಶ್ರೀಮತಿಯು ಮಮಕಾರವನ್ನೆಸಗುವುದಕ್ಕೂ, ಅಯ್ದಾವೃತ್ತಿ ಮರಣಬಾಧೆ ತಪ್ಪುವುದಕ್ಕೂ ಕಾರಣಗಳನ್ನು ತಿಳಿಯಲಪೇಕ್ಷೆಯು.

**ಮುನಿ:**— ಭವ್ಯನೆ! ಪೂರ್ವಜನ್ಮಚರಿತವನ್ನು ವಿಸ್ತರದಿಂದ ತಿಳಿಸುವೆನು. ಆಲಿಸು.

**ಕಂದ** || ಮುನಿಮತದೆ ಮೊದಲ ಮತ್ಸ್ಯಮ |
ನನುವಿಂ ಸಂಜೆಯೊಳೆ ಮನೆಗೆ ತರಲಂಬಿಗನಾ ||
ತನ ಮಡದಿ ನೂಂಕೆ, ಕರ್ಕೋ |
ಟನಿನಳಿದಂ ಶ್ರಮಣಧರ್ಮಮಂ ನುತಿಯಿಸುತುಂ ||

ಅಲ್ಲದೆ ಕೇಳು.

**ಕಂದ** || ಪತಿಪಥಮಂ ಶರಣೆಂದಾ |
ಸತಿ ಪಿಡಿಯಲ್, ಜನ್ಮಮಾಯ್ತು ಧನಕೀರ್ತಿಶ್ರೀ ||
ಮತಿಯುರ, ಷೋಡಶಕಲ್ಪಂ |
ಗತಿಸಲ್ ದೊರೆಕೊಳ್ಗುಮವರ್ಗೆ ಜೀವನ್ಮೋಕ್ಷಂ ||
ಬಂಧನಮುಳಿದಾ ಶಫರಿಗೆ |
ಬಂಧುರರಾಜನ್ಯಸುತೆಯು ಜನ್ಮಮುದಾಗ ||
ಲ್ಕಂದಿನಹಿಂಸಾವ್ರತಫಲ |
ದಿಂದಾ ಧನಕೀರ್ತಿಯುಳಿದನಪಮೃತ್ಯುವೊಳಂ ||

ದೊರೆಯೆ! ಕಥಾನಾಯಕನ ಚರಿತವು ಈ ರೀತಿಯಿಂದಿರುವುದು. ಅಹಿಂಸಾವ್ರತದ ಮಹಿಮೆಯನ್ನು ವರ್ಣಿಸಲು ಸುರಗುರುವು ಕೂಡ ಅಸಮರ್ಥನೇ.

ರಾಜ:—ಪೂಜ್ಯರೆ! ಇಂದಿಗೆ ಸಂಸಾರವಿಚಿತ್ರತೆಯನ್ನು ಪರಿಶೀಲಿಸಿದೆನು.

|| ರಾಗ–ಯಮುನಾಕಲ್ಯಾಣಿ–ಆದಿ. ||

ಶೀಲ ಸದ್ಗುಣಜಾಲ | ಪಾಲ ವಿಶಾಲ || ಪಲ್ಲ || ಸೃಷ್ಟಿಗುರುವೆ ಪರಿ | ತುಷ್ಟನಾದೆನು ನಾನು | ಇಷ್ಟದಾಯಕ ಮುನಿ | ಶಿಷ್ಟ ವಂದಿಸುವೆನು || ಅನುಪಲ್ಲ || ಮಂಗಳಾತ್ಮಕ ಶ್ರೀಶ | ಸಂಗವಿನಾಶ || ಅಂಗಜಹರಭವ | ಭಂಗದೂರನೆ ಜಿನ | ಪುಂಗವಮುದ್ರೆಯ | ಸಂಗವ ಕರುಣಿಸು || ೧ || ಭಾನು ಸುನಯಪೂರ | ಧ್ಯಾನವಿದೂರ || ಮಾನವಾಧಿಪವಂದ್ಯ | ಜ್ಞಾನಿಯೆ ನಿನ್ನಯ | ಸಾನುರಾಗದೆ ಸರ್ವ | ಮಾನವಾಂತೆನು ದೇವ || ೨ ||

ಆದುದರಿಂದ, ಕರ್ಮಕ್ಷಯಕ್ಕೆ ಕಾರಣವಾದ ಜಿನದೀಕ್ಷೆಯನ್ನು ನನಗೆ ಅನುಗ್ರಹಿಸುವನಾಗು.

**ಮುನಿ:**—ಆಗಲಿ! ಅದಕ್ಕೇನು? ಪಟ್ಟಣವನ್ನು ಸೇರಿ ಪತ್ನೀಪುತ್ರಾದಿಗಳೊಡನೆ ಸಮಸ್ತಕಾರ್ಯಗಳನ್ನೂ ನೆರವೇರಿಸಿ ನನ್ನ ಬಳಿಗೆ ಬಾ.

ಧನಕೀರ್ತಿ:— ಅಪ್ಪಣೆ. (ಮುನಿಗಳನ್ನು ನಮಸ್ಕರಿಸಿ ತನ್ನಷ್ಟಕ್ಕೆ) ನನ್ನ ಭಾವವನ್ನರಿತೇ ಮಹರ್ಷಿಗಳು ಈ ರೀತಿ ಹೇಳಿರಬಹುದು. ಈ ಕಾಲದಲ್ಲಿ ಆಜ್ಞಾಭಂಗವು ಯುಕ್ತವಲ್ಲ. ಪಟ್ಟಣವನ್ನು ಸೇರಿ ಪಟ್ಟಬಂಧವನ್ನು ಮಾಡಿಯೇ ಹಿಂತೆರಳುವೆನು. (ಎಂದು ಹೋಗುವನು.)



[ಅರಮನೆ.]

ಧನಕೀರ್ತಿ:—ಮಂತ್ರಿಯೆ! ಸುಕೀರ್ತಿಕುಮಾರನನ್ನು ಬರಮಾಡು.

ಮಂತ್ರಿ:—ಆಜ್ಞೆ! (ಎಂದು ಹೋಗುತ್ತಾ) ರಾಜನಿಗೆ ಈ ಕಾಲದಲ್ಲಿ ನೀತಿ ಬೋಧೆಯು ಫಲಕಾರಿಯಾಗಲಾರದು. ಕುಮಾರನಾದರೊ, ಚಿಕ್ಕವನು. ಮಾಡತಕ್ಕದೇನು? ಈ ವಾರ್ತೆಯನ್ನು ರಾಣಿಗೆ ತಿಳಿಸುವೆನು. ಸಿದ್ಧಿಸಿದರೆ ಪುಣ್ಯವು.—(ಎಂದು ಹೋಗಿ ಕರೆದುತರುವನು.)

ಧನಕೀರ್ತಿ:—(ಕುಮಾರನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ಮುದ್ರೆಯುಂಗುರ ವನ್ನಿಟ್ಟು) ಸುಕೀರ್ತಿಯೆ! ಕೀರ್ತಿಯುಕ್ತನಾಗಿ ಸರ್ವೋತ್ಕರ್ಷದಿಂದ ವರ್ತಿಸು.

|| ರಾಗ-ಬೇಹಾಗ್‌ಜಿಲಾ. ಆದಿತಾಳ. ||

ನಾಕರಾಜನಂತೆ ಭೂ | ಲೋಕವಂ ಪಾಲಿಸೈ || ಪಲ್ಲ || ಭೂತಳ | ನಾಥರ | ಪ್ರೀತಿಯಿಂ | ಭೀತಿಯಿಂ || ನೀತಿಬಂಧುರ | ಸುಂದರ | ಕರುಣಿಸೈವರ | ಹರುಷದಲಿ | ಮೆರೆಯುತಲಿ | ವಾರಿಧಿಸಮ | ಸಾರಗಂ | ಭೀರದಿಂ | ಬಾಳೆ ಲೈ | ನೀರಜ | ನೇತ್ರನೆ || ೧ || ತಾಮರಸಾವಾಸ ಶ್ರೀ | ನೇಮಿಯಂ ಪೂಜಿಸಿ || ನೇಮದೆ | ಪ್ರೇಮಲ | ಲಾಮನಿ | ಸ್ಸೀಮನೆ || ಸಾಮಧರ್ಮದೆ | ಧೈರ್ಯದೆ | ಭವ್ಯವಾರಿಧೆ || ಒಲಿಯೆ ಮುದಾ | ಸಲಹೊ ಸದಾ || ರಾಜಮಾ | ರ್ತಾಂಡ ವಿ | ರಾಜಿಸೈ | ತೇಜದಿಂ | ಮೂಜಗದಾಣ್ಮನೆ || ೨ || ಬಾಲಚಂದ್ರನಂತೆ ಪಾ | ಶೀಲದಿಂ ಪ್ರಜೆಗಳ || ಜಾಲವ | ಲೀಲೆಯಿಂ | ಲೋಲನೆ | ಬಾಲರ || ಮಾತೆ ಯಂದದೆ | ಖ್ಯಾತನೆ | ಸಾತಿಶಯದೊಳೆ || ಮನವಿರಿಸಿ | ಘನತರದಿ || ಈ ಕ್ಷಿಸಿ ಸಂ | ರಕ್ಷಿಸೈ | ಪಕ್ಷರ ವಿ | ಪಕ್ಷರ | ಶಿಕ್ಷಿಪುದೆ ತೆರ || ೩ || (ಎಂದು ಹೊರಡುವನು.)

ಶ್ರೀಮತಿ:—(ಪ್ರವೇಶಿಸಿ ತನ್ನಲ್ಲಿ) ವಲ್ಲಭನು ಏನೂ ಅರಿಯದ ಎಳಮಗು ವಿಗೆ ಪಟ್ಟಾಭಿಷೇಕವನ್ನು ಮಾಡಿ ನನ್ನನ್ನು ವಂಚಿಸಿ ಜಿನದೀಕ್ಷೆಯನ್ನು ಪರಿಗ್ರ ಹಿಸುವಂತಿದೆ. ಪುರುಷರ ಮನಸ್ಸು ವಜ್ರದಿಂದಲೂ ಕಠಿಣವು. (ಮುಂದೆ ನಡೆದು ದೈನ್ಯದಿಂದ ಪತಿಯನ್ನು ಕಂಡು)

|| ರಾಗ-ಕೇತಾರಗೌಳ-ರೂಪಕ. ||

ನ್ಯಾಯವೇನಿದು | ಕಾಯೊ ಬೇಗನೆ | ತೋಯಜಾಕ್ಷನೆ || ಅನು
ಸಾರಸದ್ಗುಣ | ಸೇರಿದೆನ್ನನು | ವಿಾರಿ ಪೋದರೆ | ಧೀರನೆಂಬರೆ || ೧ || ದೀ
ನಂದದೆ | ಪುಟ್ಟಬಾಲನ | ಬಿಟ್ಟು ಪೋಪುದು | ಸುಟ್ಟ ಬಾಳಿದು || ೨ || ನಾ
ವೇಣಿಯ | ನೀಗೆ ಮೋಸದೆ | ಯೋಗಮಾರ್ಗವೆ | ಸಾಗಲಾರದೆ || ೩
ಜಾಣನೀ ಪರಿ | ಕೇಣಗೊಂಡರೆ | ಪ್ರಾಣಕಾಂತೆ ನಿ | ನ್ನಾಣೆ ನಿಲ್ಲಳು || ೪

ಜೀವರತ್ನವೆ! ಪ್ರಾಣತ್ಯಾಗದಲ್ಲಿಯೂ ನಿಮಿಷಾರ್ಧವೂ ಅಗಲಿ ಇ
ಲಾರೆನು. ಛಲವಿಡಿದಲ್ಲಿ ಪೂಜ್ಯರ ಮಾರ್ಗವನ್ನೇ ಅವಲಂಬಿಸುವೆನು
(ಎಂದು ಪಾದಕ್ಕೆ ಬೀಳುವಳು.)

ಧನಕೀರ್ತಿ:— ಪ್ರಿಯೆ ಈ ರೀತಿಯಾದ ನಿರ್ಬಂಧವು ಸತಿಗೆ ಭೂಷಣ
ಲ್ಲವು. ಇಂತಹ ಚತುರೋಕ್ತಿಗಳು ನನ್ನಲ್ಲಿ ಸಾರ್ಥಕವಾಗವು. ಖಂಡಿತವಾ
ಯೂ ಬಿಡು.

ಶ್ರೀಮತಿ:—ತಮ್ಮ ಪಾದದಾಣೆಗೂ ಅಗಲೆನು. ಇದು ನಿಜವು.

ಧನಕೀರ್ತಿ:—ಬೇಡಬೇಡ. ಇದು ತರವಲ್ಲ.

|| ರಾಗ-ಶಂಕರಾಭರಣ-ಅಷ್ಟತಾಳ. ||

ಛಲ ಬೇಡ ಬಿಡು ತರುಣಿ | ಜಲಜಾಂಬಕಿಯೆ | ಅಲಿಕುಂತಲೆಯೆ ||ಪಲ್ಲ
ಶೀಲವತಿ ನೀಂ | ಕಾಲವರಿಯದೆ | ಲೀಲೆಗೆಯ್ದುದೆ | ಸಾಲದೆ || ಲೋಲಲೊ
ಚನೆ | ಜಾಲವೆಸಗಲು | ಕಾಲವಲ್ಲವು | ಮೇಲೆನಿಸದದು || ೧ || ಮಾ
ವೇಶನ | ಫಾಲಲಿಖಿತದ | ಕೂಲವಿದೊ ಅನು | ಕೂಲವು || ಲೀಲೆ ಮಿ
ಯದು | ಪಾಲಕನ ಸುವಿ | ಶಾಲಪದವನು | ಬಾಲೆಪೂಜಿಸು || ೨ ||

ಇದರಿಂದಲೇ ನೀನು ಪಾವನೆಯಾಗುವೆ. (ಎಂದು ಮುಂದೊತ್ತುವನು.)

ವಿಶ್ವವತಿ:—(ಪ್ರವೇಶಿಸಿ) ಇದೇನಿದು? ಈ ವೈಪರೀತ್ಯ? (ಪ್ರಕಾಶವಾಗಿ
ಪ್ರಾಣಕಾಂತನೆ! ಅಬಲೆಯರಲ್ಲಿ ನಿಷ್ಕರುಣವು ಯುಕ್ತವೇ? ಇದು ಧೀ
ಪುರುಷರ ಲಕ್ಷಣವಲ್ಲ. ಮುಂಬರಿಯಬೇಡ. (ಎಂದು ತಡೆಯುವಳು.)

ಧನಕೀರ್ತಿ:—ಹಾ! ಓರೆಯಾಗು.

|| ಬೇಹಾಗ್‌ಜಿಲ್ಲಾ-ತಾಳ-ಏಕ. ||

ಥಟ್ಟನೆ ಮೈ | ಮುಟ್ಟದಿರು ಕೈ | ಕಟ್ಟದಿರು ಪಥ | ಬಿಟ್ಟುಸಿರು || ಪ || ಸೃಷ್ಟಿಸುಖವು | ಶಿಷ್ಟರಿಗೆ | ಕಷ್ಟವೆಂಬುದು | ದೃಷ್ಟಿಸಿರು || ೧ ||

ವಿಶ್ವವತಿ:—

ಇಷ್ಟ ನಿನಗೆ | ಶ್ರೇಷ್ಠ ಸುಖ || ಮನ | ಮುಟ್ಟಿದೋರ್ಪೆ ದಯ | ವಿಟ್ಟು ಪೊರೆ || ಥಟ್ಟನೆ ಮೈ | ಮುಟ್ಟುವೆನು ಕೈ | ಕಟ್ಟುವೆನು ಪಥ | ಬಿಟ್ಟೆರೆನು || ೨ ||

ಧನಕೀರ್ತಿ:—ನಾರಿಯು ಮಾಯಾ | ಕಾರದಿ ಮೋಹವಿ | ಕಾರವ ಬೀರುವ | ಮಾರಿ ಖರೆ || ೩ ||

ವಿಶ್ವವತಿ:—ಸ್ತ್ರೀಯಲ್ಲಿ ವಂಚಿಸುವಿರಾ?

ಧೀರಪುರುಷ ಗಿರಿ | ಧರಸುರವರನಾ | ನೀರೆಗಿರಿಜೆಯನು ವಿಾರಿದನೆ || ೪ ||

ಧನಕೀರ್ತಿ:—ಪನ್ನಗವೇಣಿಯೆ | ಇನ್ನೆನೆ ನಿನ್ನಯ | ಮನ್ನಣೆವಡೆದಾ ಕನ್ನೆಯರ || ೫ ||

ವಿಶ್ವವತಿ:—ಎನ್ನಯ ರಮಣ | ಮನ್ನಿಸುವೆನು ಸಂ | ಪನ್ನ ಜನಕಸುತೆ | ಯನ್ನು ಸದಾ || ೬ ||

ಧನಕೀರ್ತಿ:—ಮೂರ್ಖಳೆ! ನೀನು ಸೀತೆಯೆಂಬ ನಾಮವನ್ನು ಮಾತ್ರ ಸ್ಮರಿಸಿದುದಲ್ಲದೆ ಅವಳ ಗುಣಾತಿಶಯವನ್ನು ಸ್ಮರಿಸಲಿಲ್ಲ.

ವಿಶ್ವವತಿ:—ಪ್ರಿಯ! ಈಗ ಬೋಧೆಯಾಯಿತು. ಮೂಢಸ್ತ್ರೀಯಲ್ಲವೇ? ಕ್ಷಮಿಸಿ. ಸೀತಾಮಾತೆಯು ರಾಮಚಂದ್ರನಿಂದ ಮೊದಲೇ ದೀಕ್ಷಾಗ್ರಸ್ತಳಾಗಿರುವಳು. ವ್ಯರ್ಥವಾಗಿ ಖೇದಗೊಳಿಸಿ ಪಾಪಿಯಾದೆನು. ಸ್ವಾಮಿಯೆ! ನನ್ನ ಕರ್ತವ್ಯವನ್ನು ತಿಳಿಸಬೇಕು.

ಧನಕೀರ್ತಿ:—ಕಾಮವಿಚಾರೆ | ನಾಮಸಾಸಿರನ | ನೇಮಿಯ ನುತಿಯಿಸು ಧೀಮಂತೆ || ೭ ||

ಇದರಿಂದಲೇ ನೀನು ಪುರುಷತ್ವವನ್ನು ಪಡೆದು ಕ್ರಮೇಣ ಮೋಕ್ಷ ನ್ನೂ ಸಂಪಾದಿಸುವೆ. ಸಂಸಾರವು ಅಸ್ಥಿರವೆಂದು ಖಂಡಿತವಾಗಿ ನಂಬ (ಎಂದು ಮುಂದೊತ್ತುವನು.)

ಸುಕೀರ್ತಿ:—(ಪೀಠದಿಂದೆದ್ದು ಬಂದು) ॥ ರಾಗ—ಆದಿ. ॥

ಕಡಿದೆನ್ನ ಸಾಗು । ಬಿಡಲಾರೆ ತಾತನೆ ॥ ಪಲ್ಲ ॥ ನಿನಗಿಷ್ಟನಲ್ಲವೆ ನೊ ಡೈ ॥ ಘನಕಷ್ಟಪಡಿಸಲು ಬೇಡೈ । ಮನಮುಟ್ಟಿ ಕರುಣವ ನೀಡೈ ॥ ೧ ಮತಿಹೀನಬಾಲನ ಕಾಯ್ವೈ । ನತಿಪೆನು ಕ್ಷಮಿಸಿ ನೀ ಬಾರೈ ॥ ಗತಿದೋ ಜತೆಯನಗಲೆನೈ ॥ ೨ ॥ ಕರನೀಡಿ ಕರೆಯಲು ಬೇಗ । ತ್ವರೆಗೊಂಡು ಬರು ರಲೀಗ ॥ ಪರಿರಂಭಿಸುವೆನು ಸುಭೋಗ ॥ ೩ ॥

ನಾನೂ ಬರುವೆನು. ನಿನ್ನನ್ನು ಬಿಟ್ಟಿರಲಾರೆನು.

ಧನಕೀರ್ತಿ:—ಮಂತ್ರಿಯೇ! ಈ ಕುಮಾರನನ್ನು ಸಂತೈಸು. ಓಂ ನಮ ಸಿದ್ಧೇಭ್ಯಃ (ಎಂದು ಹೋಗುವನು.)



॥ ಇತಿ ಪಂಚಮಾಂಕಃ ॥

(ನಾಟಕಾಂತ್ಯವಾದ ಮಂಗಳ.)

॥ ರಾಗ-ರೂಪಕ. ॥

ಸುಮಂಗಲಂತವ । ನೇಮಿಜಿನೇಶ ॥ ಸಮವಸರಣಧೀಶ । ನಮಿತಸುರ ಶ ॥ ಮುರರಿಪುಸೇವ್ಯ । ಹರಿಕುಲಭವ್ಯ । ಶೌರಿಪುರಾಧಿಪ । ಪರದಿನಪ ಮಾರವಿಕಾರ । ದಾರಿತಶೂರ । ಪರಮದಯಾಕರ । ಪೊರೆನಿರತ ॥ ಕೋಮ ಕಮಲಸುಮಾವಲಿಚಂಪಕ । ಸುಮನಕೇತಕೀಮಲ್ಲಿಕಾದಿನವ । ಪ್ರೇಮಭ ವದಿ । ಪದಯುಗಕೆ ॥ ೧ ॥

|| ರಾಗ-ಜೋಗುಸಾವೇರಿ-ತಾಳ-ಚಾಪು. ||

ದೇವೀ ವಿಜಯತಾಂ । ವಿಜಯತಾಂ । ವಿಜಯತಾಂ ॥ ಪಲ್ಲ ॥ ದೇವೀ ಉರಗರಾಜನ ಪ್ರಾಣರಮಣಿ । ದೇವಿ ಕರುಣಾಕಲಾಪೆ ಕಲ್ಯಾಣಿ । ದೇವಿ ಪರಮಭಕ್ತಾವಳಿಸುಮಣಿ । ದೇವಿ ನಿರತಪಾಶಾಂಕುಶಪಾಣಿ ॥ ೧ ॥ ದೇವಿ ವೀರಪಾರ್ಶ್ವೇಶನ ಸ್ಮರಣೆ । ದೇವಿ ಕ್ರೂರ ಕಮಠ ಗರ್ವಹರಣೆ । ದೇವಿ ಶೂರ ಜಿನಪ ಭವ್ಯ ಶರಣೆ । ದೇವಿ ಚಾರುಚರಿತಪರಿಪೂರ್ಣೆ ॥ ೨ ॥ ದೇವಿ ಕರಿಕಲ್ಲ ಪುರದಧಿನಾಥೆ । ದೇವಿ ಗುರುಲಲಿತಾರ್ಯೇಷ್ಟದಾತೆ । ದೇವಿ ಸ್ಥಿರಭೈರವಾರ್ಚಿತೆ ಖ್ಯಾತೆ । ದೇವಿ ವರಸಾರಸದ್ಗುಣಭರಿತೆ ॥ ೩ ॥



ಶ್ರೀಮದ್ವೀರಜಿನೇಂದ್ರವರ್ಷಯುಗಸಾಹಸ್ರೇ ಕಷಾಯೇ ಶತೇ ।
ಕಾಮಾಸ್ತ್ರೈರ್ಗುಣಿತಾಷ್ಟಕೇ ಶುಭಕರಾನಂದಾಹ್ವಯೇ ವತ್ಸರೇ ।
ಪ್ರಾಮಾಣ್ಯೇ ಸುತೃತೀಯಮಾಸಿ ವಿಲಸತ್ಪಕ್ಷೇ ದಶಮ್ಯಾಂ ತಿಥೌ ।
ನೇಮಿಾಶಾಶ್ರಿತ ಶಾಂತಿರಾಜತರುಣೇನೇಯಂ ಕೃತಿರ್ವರ್ಧಿತಾ ॥




Printed by U. Narasimha Mallya,
at the Sadananda Printing Works Co., Ltd., Udipi.

# ಶುದ್ಧಾಶುದ್ಧಪತ್ರ.



| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| 1 | 7 | ಶಾರೀಶ | ಶೌರೀಶ |
| 17 | 21 | ಜಿನಪತಿ | ಜನಪತಿ |
| 22 | 9 | ಳಲೆಯುತ್ತುಂ | ಳಲೆಯುತ್ತಂ |
| 27 | 10 | ಲ್ಕಾನೆಳಸಲ್ | ಲ್ತಾನೆಳಸಲ್ |
| 34 | 11 | ತಡಮಾಡು | ತಡಮಾಡುವುದು |
| 34 | 2 | ಸರಿಯಿಲ್ಲ | ಸರಿಯಲ್ಲ |
| 34 | 15 | ಮದನಾ | ಮಹಬಲ |
| 36 | 8 | ಮದನನ | ಮಹಾಬಲನ |
| 38 | 4 | ಸಖಿಮಾದ ಮೃಗಸೇನೆಯೊಡನೆ ಶ್ರೀಮತಿ | ಸಖಿಯೊಡನೆ ಮೃಗಸೇನ |
| ,, | 5 | ಶ್ರೀಮತಿ | ಮೃಗಸೇನೆ |
| ,, | 16 | ಶ್ರೀಮತಿ | ಮೃಗಸೇನೆ |
| 39 | 1 | ಶ್ರೀಮತಿ | ಮೃಗಸೇನೆ |
| 42 | 21 | ಆಜ್ಜೆಯಂತೆ | ಆಜ್ಞೆಯಂತೆ |
| 48 | 9 | ಳರಸುತ್ತುಂ | ಳರಸುತ್ತಂ |
| 53 | 11 | ಬಿಡೆನು | ಬಿಡನು |
| 56 | 1 | ಹೇಳಿದರೂ | ಹೇಳಿದ್ದರೂ |
| 57 | 6-7 | ಸುಂಭಸೂದಿನಿ | ಇಂಬುದೋರುತೆ |
| 59 | 13 | ಸುಕಮಾರ | ಸುಕುಮಾರ |
| 61 | 19 | ಮಿಥುನ | ವೃಶ್ಚಿಕ |
| 63 | 9 | ವುರ್ವಿ | ಪೂರ್ವಿ |
| 66 | 5 | ಕರುಣಾಸಾಗರ | ಕರುಣಸಾಗರ |
| 67 | 19 | ವಂಶಾಂಬರದ್ಯುಮಣೀ | ವಂಶಾಂಬುಧಿವರ್ಧನ |
| ,, | 19 | ಗುಣೀ | ಗುಣ |
| ,, | 20 | ಕರುಣೀ | ಕರುಣ |
| ,, | 20 | ಮನ್ಮಣೀ | ಶ್ರೀಜಿನ |
| ,, | 21 | ವಿಜಯಾನುಜ | ವಿಜಯಾತ್ಮಜ |
| 68 | 1 | ಶಿವಾಭವಜಿನ | ಶಿವಪದಂದೇಹಿ |
| 69 | 7 | ಶ್ರೀಮತಿಯು | ಮೃಗಸೇನೆ |
| ,, | 8 | ವೃತ್ತಿ | ವರ್ತಿ |

---

**ಧನಕೀರ್ತಿನಾಟಕ:**— ಈ ಪುಸ್ತಕವು 1. ನೆಲ್ಲಿಕಾರುಪೇಟೆ ಚಂದಪ್ಪ ಶೆಟ್ಟರು, 2. ಕಾರ್ಕಳ ಹಲ್ಲರಪೇಟೆ ಜಿನರಾಜ ಶೆಟ್ಟರು, 3 ಸುಮ್ಮದ ದೇವರಾಜ ಹೆಗ್ಗಡೆಯರು ಇವರಲ್ಲಿ ಕ್ರಯಕ್ಕೆ ದೊರೆವುದು.